KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೯, ೨೦೦೬ (ಆಶ್ವಯುಜ ೨೭, ಶಕ ವರ್ಷ ೧೯೨೮) | ಸಂಚಿಕೆ ೪೧ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

ಅರಣ್ಯ ಇಲಾಖೆ

ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ಅರೆಕರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ದೊರೆಸಾನಿಪಾಳ್ಯ, ಬೆಂಗಳೂರು – 560 076.

ಅರಣ್ಯ ಕಾಮಗಾರಿಗಳ ಟೆಂಡರ್ ಪ್ರಕಟಣೆ

ಸಂಖ್ಯೆ:ಎ2–ಬಿಯುಡಿ–ಸಿಆರ್–17/2005–06, ದಿನಾಂಕ: 05ನೇ ಅಕ್ಟೋಬರ್ 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2006–07ನೇ ಸಾಲಿಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ವಿಭಾಗದ ವ್ಯಾಪ್ತಿಗೊಳಪಟ್ಟಿರುವ ಹೊಸಕೋಟೆ ಸಂಶೋಧನಾ ವಲಯದ ನಲ್ಲಾಳ ಸಂಶೋಧನಾ ಕೇಂದ್ರದಲ್ಲಿ ಮಿಸ್ಟ್ ಚೇಂಬರ್, ಶೇಡ್ ಪೆಂಡಾಲ್, ನೀರಿನ ಟ್ಯಾಂಕ್ ನಿರ್ಮಾಣ ಹಾಗೂ ಸಸಿ ಬೆಳೆಸುವಿಕೆ (6x9, 4x6) ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಈ ವಿಭಾಗದಲ್ಲಿ 2006–07ನೇ ಸಾಲಿಗೆ ನೋಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಸದರಿ ಕಾಮಗಾರಿಗಳಿಗೆ ಟೆಂಡರ್ ಕರೆಯಲಾಗಿದೆ.

ದಿನಾಂಕ: 28–10–2006 ರಂದು 3.00 ಘಂಟೆಯೊಳಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು ಅದೇ ದಿನ ಕೆಳಗೆ ಸಹಿ ಮಾಡಿದವರು ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟವರು ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್ ಲಕೋಟೆಯನ್ನು 3.30 ಘಂಟೆಗೆ ತೆರೆಯುವರು ಮತ್ತು ಸದರಿ ದಿನಾಂಕದಂದು ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 04–11–2006 ರಂದು ಸಂಜೆ 3.00 ಘಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು ಮತ್ತು ಟೆಂಡರ್ ಲಕೋಟೆಯನ್ನು 3.30 ಘಂಟೆಗೆ ಟೆಂಡರ್‌ದಾರರ ಸಮ್ಮುಖದಲ್ಲಿ ತರೆಯಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.

ಷೆಡ್ಯೂಲ್

| ಸಂಖ್ಯೆ | ವಲಯ | ಕಾಮಗಾರಿಗಳ ವಿವರ | ಅಂದಾಜು ಭೌತಿಕ ಪರಿಮಾಣ | ಅಂದಾಜು ಮೊತ್ತ (ಲಕ್ಷಗಳಲ್ಲಿ) | ನಿಗಧಿಪಡಿಸಿದ ಇಎಂಡಿ ಮೊತ್ತ | ಕೆಲಸ ಮುಕ್ತಾಯ ಗೊಳಿಸುವ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಹೊಸಕೋಟೆ ಸಂಶೋಧನಾ ವಲಯ | 7.5x1/20 mtrs construction of Mist chamber at Nallal | 7.5x1/20 mtrs | 1.50 | 3,750/- | 31-12-06 | |
| 2. | " | Construction of Shade Pendal | 30' x 30' | 1.00 | 2,500/- | 31-12-06 | |

ಟೆಂಡರ್ ನಮೂನೆಯನ್ನು ದಿನಾಂಕ: 28-10-2006 ಮತ್ತು 04-11-2006 ರಂದು 1.00 ಘಂಟೆವರೆಗೆ ಕಛೇರಿ ವೇಳೆಯಲ್ಲಿ ನೀಡಲಾಗುವುದು. ಒಂದು ಟೆಂಡರ್ ಫಾರಂನ ಬೆಲೆ ರೂ. 200.00 (ತೆರಿಗೆ ಪ್ರತ್ಯೇಕ). ಒಂದೊಂದು ಕೆಲಸಕ್ಕೆ ಸಂಚಕಾರ ಠೇವಣಿಯನ್ನು ಡಿಡಿ ರೂಪದಲ್ಲಿ ಷೆಡ್ಯೂಲ್ ಕಾಲಂ ಸಂಖ್ಯೆ: 6 ರಲ್ಲಿರುವಂತೆ ಪ್ರತ್ಯೇಕವಾಗಿ ಪಡೆದು ಟೆಂಡರ್ ನಮೂನೆಯೊಂದಿಗೆ ಲಗತ್ತಿಸಬೇಕು. ಹೆಚ್ಚಿನ ವಿವರಗಳಿಗೆ ಈ ಕಛೇರಿಯ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ ಮತ್ತು ಎರಡನೇ ಬಾರಿಗೆ ಟೆಂಡರ್ ನಡೆಯಬಹುದಾದಲ್ಲಿ ಟೆಂಡರ್ ನಮೂನೆಯನ್ನು ದಿನಾಂಕ: 04-11-2006 ರಂದು 1.00 ಘಂಟೆಯವರಗೆ ಪಡೆಯಬಹುದಾಗಿದೆ.

ನಿಬಂಧನೆಗಳು

1) ಟೆಂಡರ್‌ದಾರರು 2006-07ನೇ ಸಾಲಿನಲ್ಲಿ ನೋಂದಾಯಿಸಲ್ಪಟ್ಟ ಅರಣ್ಯ ಗುತ್ತಿಗೆದಾರರಾಗಿರಬೇಕು.

2) ಟೆಂಡರ್ ಫಾರಂಗಳ ಜೊತೆ ಅಂದಾಜು ವೆಚ್ಚದ ಇ.ಎಂ.ಡಿ. ಹಣವನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರ ಹೆಸರಿನಲ್ಲಿ ಡಿ.ಡಿ. ಪಡೆದು ಫಾರಂ ಜೊತೆ ಲಗತ್ತಿಸಬೇಕು.

3) ಟೆಂಡರ್ ಫಾರಂಗಳನ್ನು ಸೀಲು ಮಾಡಿದ ಲಕೋಟೆಯಲ್ಲಿಟ್ಟು ಲಕೋಟೆಯ ಮೇಲೆ ಅರಣ್ಯ ಕಾಮಗಾರಿಗಳಿಗೆ ಟೆಂಡರ್ ಎಂದು ನಮೂದಿಸತಕ್ಕದ್ದು.

4) ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ಇದೇ ಸಂಖ್ಯೆಯ ದಿನಾಂಕದ ಸಂಕ್ಷಿಪ್ತ ಟೆಂಡರ್ ಪ್ರಕಟಣೆಯಲ್ಲಿ ತಿಳಿಸಿರುವಂತೆ ಆಯಾ ದಿನಾಂಕದಂದು ಕಛೇರಿ ವೇಳೆಯಲ್ಲಿ ಕೊಡಲಾಗುವುದು, ಟೆಂಡರ್ ಫಾರಂ ಬೆಲೆ ರೂ. 200.00 (ತೆರಿಗೆ ಪ್ರತ್ಯೇಕ).

5) ಕೆಲಸಗಳನ್ನು ಈ ಕಛೇರಿಯಿಂದ ನೀಡಲಾಗುವ ಡ್ರಾಯಿಂಗ್ ಹಾಗೂ ವಿತರಣೆ ಮಾದರಿ ರೀತಿಯೇ ಮಾಡಬೇಕು. ಹಾಗೂ ಅಂದಾಜು ಪಟ್ಟಿಗಳನ್ನು (ಸಂಬಂಧಿಸಿದ ಕಾಮಗಾರಿಗಳಿಗೆ) ತಯಾರಿಸಿ ಪಿ.ಡಬ್ಲ್ಯೂ.ಡಿ ಯಿಂದ ತಾಂತ್ರಿಕ ಪರಿಶೀಲನೆ ಮಾಡಿಸಿ (ತಾಂತ್ರಿಕ ಪರಿಶೀಲನೆ ವೆಚ್ಚವನ್ನು ಇಲಾಖಾ ವತಿಯಿಂದ ಭರಿಸಲಾಗುವುದು). ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು, ಇವರಿಂದ ಒಪ್ಪಿಗೆ ಪಡೆದ ನಂತರ ಕೆಲಸ ನಿರ್ವಹಿಸಬೇಕು.

6) ದಿನಾಂಕ: 28-10-2006 ಮತ್ತು 04-11-2006 ಸಂಜೆ 3.00 ಘಂಟೆ ವೇಳೆಯವರೆಗೆ ಟೆಂಡರನ್ನು ಈ ಕಛೇರಿಯಲ್ಲಿ ಅದಕ್ಕೆಂದೇ ಇಟ್ಟಿರುವ ಟೆಂಡರ್ ಡಬ್ಬದಲ್ಲಿ ಹಾಕಬೇಕು.

7) ದಿನಾಂಕ: 28-10-2006 ಮತ್ತು 04-11-2006 ಸಂಜೆ 3.00 ಘಂಟೆಗೆ ಹಾಜರಿರುವ ಗುತ್ತಿಗೆದಾರರ / ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.

8) ಟೆಂಡರ್‌ಗಳನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರ ಅರಣ್ಯ ಕೃಷಿಕರು, ಕೇಂದ್ರ ವಲಯ ರವರಿಗೆ ಇರುತ್ತದೆ. ತಿರಸ್ಕೃತ ಟೆಂಡರ್‌ಗಳಿಗೆ ಕಾರಣ ನೀಡಲಾಗುವುದಿಲ್ಲ.

9) ಪಿ.ಡಬ್ಲ್ಯೂ.ಡಿ. ದರಗಳಲ್ಲದ ಕೆಲಸ, ವಸ್ತುಗಳಿಗೆ ಡಾಟಾ ತಯಾರಿಸಿ ಪಿ.ಡಬ್ಲ್ಯೂ.ಡಿ. ಅಧಿಕೃತ ಅಭಿಯಂತರರಿಂದ ಅಂಗೀಕರಸಲ್ಪಟ್ಟ ದರವನ್ನು ಅಳವಡಿಸಿ ಅಂದಾಜು ಪಟ್ಟಿ ತಯಾರಿಸಲಾಗುವುದು. ಅರಣ್ಯ ಕಾಮಗಾರಿಗಳಿಗೆ ಇಲಾಖೆಯ ಎಸ್.ಎಸ್.ಆರ್ ದರದಂತೆ ಅಂದಾಜು ಪಟ್ಟಿಯನ್ನು ತಯಾರಿಸಿ ನೀಡಲಾಗುತ್ತದೆ. ಆ ಅಂದಾಜು ಪಟ್ಟಿಗಳಂತೆ ಕೆಲಸಗಳನ್ನು ನಿರ್ವಹಿಸಬೇಕಾಗಿರುತ್ತದೆ.

10) ಯಶಸ್ವಿ ಟೆಂಡರ್‌ದಾರರು ಕಾರ್ಯಾದೇಶ ಕೊಟ್ಟ 3 ದಿನಗಳೊಳಗೆ ಈ ಕಛೇರಿಯಲ್ಲಿ ರೂ. 200.00 ರ ಛಾಪಾ ಕಾಗದದ ಮೇಲೆ ಕರಾರು ಮಾಡಿಕೊಂಡು ಕೆಲಸದ ಆದೇಶ ಪಡೆಯುವುದು.

11) ಗುತ್ತಿಗೆದಾರರು ಸೂಚಿಸಬಹುದಾದ ಯಾವುದೇ ಷರತ್ತು / ಷರತ್ತಿನ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ.

12) ಇ.ಎಂ.ಡಿ. ಹಣವನ್ನು ಯಶಸ್ವಿ ಟೆಂಡರ್‌ದಾರರಿಗೆ ಟೆಂಡರ್ ಕೆಲಸ ಮುಗಿದ ನಂತರ ಹಿಂತಿರುಗಿಸಲಾಗುವುದು.

13) ಪ್ರತಿ ಬಿಲ್‌ನಲ್ಲಿ ಆದಾಯ ತೆರಿಗೆ ಹಾಗೂ ಅದರ ಮೇಲೆ ಚಾಲ್ತಿಯಲ್ಲಿರುವ ಸರ್‌ಚಾರ್ಜನ್ನು ಮತ್ತು ಮಾರಾಟ ತೆರಿಗೆಯನ್ನು ನಿಯಮದಂತೆ ಹಿಡಿಯಲಾಗುವುದು.

14) ಈ ಗುತ್ತಿಗೆಯ ಬಗ್ಗೆ ಯಾವುದಾದರೂ ತಂಟೆ ತಕರಾರು ಬಂದರೆ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ ಮತ್ತು ಬಳಕೆ ವೃತ್ತ ಇವರ ನಿರ್ಧಾರವೇ ಅಂತಿಮ ನಿರ್ಧಾರವಾಗಿರುತ್ತದೆ.

15) ಟೆಂಡರ್‌ದಾರರು ಅಂದಾಜು ಪಟ್ಟಿಯಲ್ಲಿ ನಮೂದಿಸಿರುವ ದರಗಳಿಗೆ ಪಿ.ಡಬ್ಲ್ಯೂಡಿ. 2006-07ನೇ ಸಾಲಿನ ದರಕ್ಕಿಂತ ಶೇಕಡ ಎಷ್ಟು ಹೆಚ್ಚು ಅಥವಾ ಎಷ್ಟು ಕಡಿಮೆ ಎಂಬುದನ್ನು ಸ್ಪಷ್ಟವಾಗಿ ಸಂಖ್ಯೆ ಮತ್ತು ಪದಗಳಲ್ಲಿ ನಮೂದಿಸಬೇಕು.

16) ಕೆಲಸದ ಆದೇಶದ ನೀಡಿದ ದಿನಾಂಕದಿಂದ ನಿಗಧಿಪಡಿಸಿದ ದಿನಾಂಕದೊಳಗೆ ಕೆಲಸವನ್ನು ಪೂರೈಸತಕ್ಕದ್ದು.

17) ಟೆಂಡರ್‌ದಾರರ ವತಿಯಿಂದ ನೇಮಿಸತಕ್ಕ ಕೆಲಸಗಾರರ ವಿವರಗಳನ್ನು ಈ ಕಛೇರಿಗೆ ನೀಡತಕ್ಕದ್ದು, ಮತ್ತು ಕಟ್ಟಡದ ಕೆಲಸದ ಅವಧಿಯಲ್ಲಿ ಯಾವುದೇ ವಿಧವಾದ ಆಸ್ತಿ:ನಷ್ಟ ಸಂಭವಿಸಿದಲ್ಲಿ ಸಂಬಂಧಪಟ್ಟ ಗುತ್ತಿಗೆದಾರರೇ ಹೊಣೆಗಾರರಾಗಿರುತ್ತಾರೆ.

18) ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು:ಅರಣ್ಯ ಕೃಷಿಕರು ಪರಿಶೀಲಿಸಿ ಪ್ರಮಾಣೀಕರಿಸಿದ ನಂತರ ಬಿಲ್‌ನ್ನು ಪಾವತಿಸತಕ್ಕದ್ದು.

19) ಟೆಂಡರ್‌ದಾರರು 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ವ್ಯಕ್ತಿಗಳನ್ನು ಕೆಲಸಕ್ಕೆ ನಿಯೋಜಿಸಬಾರದು.

20) ಅರಣ್ಯ ಕೃಷಿಕರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿ ಅಥವಾ ಪ್ರತಿನಿಧಿ ಸದರಿ ಕೆಲಸವನ್ನು ಅವರು ನೋಡಬಯಸಿದ್ದಲ್ಲಿ ಅದಕ್ಕೆ ಅನುವು ಮಾಡಿಕೊಡಬೇಕು.

21) ಸಾರ್ವತ್ರಿಕ ರಜಾ ದಿನಗಳಲ್ಲಿ ಕೆಲಸ ಮಾಡಬೇಕಾದರೆ ಅರಣ್ಯ ಕೃಷಿಕರುಗಳ ಅನುಮತಿಯನ್ನು ಬರವಣಿಗೆಯಲ್ಲಿ ಪಡೆಯತಕ್ಕದ್ದು.

22) ಟೆಂಡರ್‌ದಾರರು ನಿರ್ವಹಿಸಿದ ಕೆಲಸಗಳ ಪೈಕಿ ಕಟ್ಟಡದ ಯಾವುದೇ ಕೆಲಸ ಅರಣ್ಯ ಕೃಷಿಕರಿಗೆ ತೃಪ್ತಿಕರವಾಗದೆ ಇದ್ದಲ್ಲಿ ಆ ಕೆಲಸಕ್ಕೆ ಅರಣ್ಯ ಕೃಷಿಕರ ತೀರ್ಮಾನವೇ ಅಂತಿಮವಾದುದು.

23) ಕೆಲಸಗಳು ಮುಗಿದ ನಂತರ ಅದರ ಅಳತೆಯನ್ನು ಲೋಕೋಪಯೋಗಿ ಇಲಾಖೆಯವರು ನಿಗಧಿಪಡಿಸಿರುವ ಮಾಪನ ಪದ್ಧತಿಯ ರೀತ್ಯ ಮಾಡಲಾಗುವುದು. ಅರಣ್ಯ ಕಾಮಗಾರಿಗಳಿಗೆ ಸಂಬಂಧಿಸಿದಂತೆ, ಅರಣ್ಯ ಮಾಪನ ಪದ್ಧತಿಯ ರೀತ್ಯಾ ಮಾಡಲಾಗುವುದು.

24) ಕೆಲಸದ ಆದೇಶ ನೀಡಿದ ದಿನದಿಂದ ಕರಾರು ಪತ್ರದಲ್ಲಿ ನಿಗಧಿ ಪಡಿಸಿದ ಅವಧಿಯೊಳಗೆ ಕೆಲಸವನ್ನು ಮುಗಿಸದೆ ಇದ್ದ ಪಕ್ಷದಲ್ಲಿ ಅಂದಾಜು ವೆಚ್ಚದ ಶೇಕಡ ಒಂದರಷ್ಟನ್ನು ಅಥವಾ ಅರಣ್ಯ ಸಂರಕ್ಷಣಾಧಿಕಾರಿಗಳು : ಅರಣ್ಯ ಕೃಷಿಕರು ನಿಗಧಿಪಡಿಸಿದ ಮೊತ್ತವನ್ನು ದಂಡವಾಗಿ ಕಟ್ಟಬೇಕಾಗುತ್ತದೆ.

25) ಈ ಕೆಲಸ ಕೈಗೊಳ್ಳುವಾಗ ಟೆಂಡರುದಾರರಿಂದ ಇಲಾಖೆಗೆ ಯಾವುದಾದರೂ ಪರಿಹಾರ : ದಂಡ ಬಾಕಿ ಬರಬೇಕಾಗಿದ್ದಲ್ಲಿ ಅದನ್ನು ಅವರ ಹೆಸರಿನಲ್ಲಿರುವ ಭದ್ರತಾ ಠೇವಣಿಯಲ್ಲಿ ಮರಿದುಕೊಳ್ಳಲಾಗುವುದು.

26) ಟೆಂಡರುದಾರರು ನಿಗಧಿತ ಅವಧಿಯಲ್ಲಿ ಕೆಲಸವನ್ನು ಪೂರೈಸದೆ ಅಪೂರ್ಣ ಸ್ಥಿತಿಯಲ್ಲಿ ಬಿಟ್ಟು ಹೋದ ಪಕ್ಷದಲ್ಲಿ ಸದರಿ ಕೆಲಸವನ್ನು ಟೆಂಡರುದಾರರ ಸ್ವಂತ ಜವಾಬ್ದಾರಿ ಮತ್ತು ವೆಚ್ಚದಲ್ಲಿ ಇಲಾಖಾ ವತಿಯಿಂದ ಮಾಡಿಸಲು ಅರಣ್ಯ ಕೃಷಿಕರಿಗೆ ಸಂಪೂರ್ಣ ಹಕ್ಕು ಇರುತ್ತದೆ. ಮತ್ತು ಈ ಸಂಬಂಧ ಅರಣ್ಯ ಕೃಷಿಕರು ಕೆಲಸದ ಬಗ್ಗೆ ನೀಡಿದ ಧೃಢೀಕರಣ ಪತ್ರವೇ ಅಂತಿಮವಾಗಿರುತ್ತದೆ.

27) ಬಿಲ್ಲುಗಳನ್ನು ಪಾವತಿಗೆ ಸಲ್ಲಿಸುವಾಗ ನಿಗಧಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

28) ಟೆಂಡರುದಾರರಿಗೆ ನೀಡಲಾದ ಮಾದರಿ ಮತ್ತು ವಿವರಣೆಯಲ್ಲಿ ಬದಲಾವಣೆಗಳನ್ನು ಮಾಡಲು ಅರಣ್ಯ ಕೃಷಿಕರುಗಳಿಗೆ ಅಧಿಕಾರವಿರುತ್ತದೆ, ಈ ಬದಲಾವಣೆಗಳಿಂದ ಕರಾರು ಒಪ್ಪಂದ ಅನೂರ್ಜಿತಗೊಳ್ಳುವುದಿಲ್ಲ.

29) ಕೆಲಸದಲ್ಲಿ ಏನಾದರೂ ಬದಲಾವಣೆ : ಮಿತಿಗೊಳಿಸಿದಲ್ಲಿ ಟೆಂಡರುದಾರರು ಕ್ಲೈಮ್ ಮಾಡಬಹುದಾದ ಯಾವುದೇ ರೀತಿಯ ಪರಿಹಾರವನ್ನು ನೀಡಲು ಇಲಾಖೆ ಬದ್ದವಾಗಿರುವುದಿಲ್ಲ.

30) ಕೆಲಸದ ಅವಧಿಯ ವಿಸ್ತರಣೆ ಬಗ್ಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರು ನೀಡಿದ ಆದೇಶವೇ ಅಂತಿಮವಾಗಿದ್ದು, ಇದನ್ನು ಎಲ್ಲಾ ಟೆಂಡರುದಾರರು ಒಪ್ಪಿಕೊಳ್ಳಲು ಬದ್ಧರಾಗಿರಬೇಕು.

31) ಟೆಂಡರುದಾರರು ನಿರ್ವಹಿಸಿದ ಕೆಲಸದ ಗುಣಮಟ್ಟ ಕೆಳಪೆಯಾಗಿದ್ದಲ್ಲಿ ಅರಣ್ಯ ಕೃಷಿಕರು ನಿಗಧಿಪಡಿಸುವ ದಂಡವನ್ನು ಕಟ್ಟಬೇಕು ಹಾಗೂ ಸದರಿ ಕೆಲಸವನ್ನು ಟೆಂಡರುದಾರರ ವೆಚ್ಚದಲ್ಲಿ ಸರಿಪಡಿಸಬೇಕು.

32) ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರ ಪೂರ್ವಾನುಮತಿ ಇಲ್ಲದೆ ಬೇರೆಯವರಿಗೆ ಗುತ್ತಿಗೆದಾರರು ವಹಿಸಿಕೊಟ್ಟಲ್ಲಿ ಕೆಲಸದ ಆದೇಶವನ್ನು ರದ್ದು ಪಡಿಸುವುದಲ್ಲದೆ ಇ.ಎಂ.ಡಿ. ಮತ್ತು ಭದ್ರತಾ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

33) ಕೆಲಸದ ಅವಧಿಯಲ್ಲಿ ಗುತ್ತಿಗೆದಾರರು ನೇಮಿಸಿಕೊಂಡ ನೌಕರರಿಗೆ ಏನಾದರೂ ಪೆಟ್ಟು ಬಿದ್ದಲ್ಲಿ ಅಥವಾ ಆಕಸ್ಮಿಕ ಸಂಭವಿಸಿದಲ್ಲಿ ಅವರ ಚಿಕಿತ್ಸಾ ವೆಚ್ಚವನ್ನು ಟೆಂಡರುದಾರರೇ ಭರಿಸಬೇಕು, ಒಂದು ವೇಳೆ ಈ ವೆಚ್ಚವನ್ನು ಇಲಾಖೆ ಭರಿಸಿದಲ್ಲಿ ಟೆಂಡರುದಾರರಿಗೆ ನೀಡಬೇಕಾದ ಬಿಲ್ಲಿನ ಹಣದಲ್ಲಿ ಸದರಿ ಮೊತ್ತವನ್ನು ಮುರಿದುಕೊಳ್ಳಲಾಗುವುದು.

34) ಕೆಲಸದ ಪ್ರದೇಶದಲ್ಲಿ ಕೆಲಸ ನಿರ್ವಹಿಸಿದ ಕಲಸಗಾರರ ಸುರಕ್ಷತೆಗೆ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು.

35) ಕೆಲಸ ಪ್ರಾರಂಭಿಸಿದ್ದಲ್ಲಿ ಇಲಾಖಾ ವತಿಯಿಂದ ಯಾವುದೇ ವಿಳಂಬವಾದಲ್ಲಿ ಟೆಂಡರುದಾರರಿಗೆ ಈ ಸಂಬಂಧ ಯಾವುದೇ ಪರಿಹಾರ ನೀಡಲಾಗುವುದಿಲ್ಲ.

36) ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.

37) ಬಿಲ್ಲಿನ ಹಣವನ್ನು ಯಶಸ್ವಿ ಟೆಂಡರುದಾರರಿಗೆ ಪೂರ್ಣಗೊಂಡ ಕೆಲಸಕ್ಕೆ ಕ್ರಾಸ್ಡ್ ಚೆಕ್ ಮೂಲಕ ನೀಡಲಾಗುವುದು.

38) ಟೆಂಡರುದಾರರು ನಮೂದಿಸುವ ದರವು ನಿಯಮಾವಳಿಗಳ ಪ್ರಕಾರ ತೆರಿಗೆ ದರವನ್ನು ಒಳಗೊಂಡಿರಬೇಕು. ಈ ಬಗ್ಗೆ ಗುತ್ತಿಗೆದಾರರಿಗೆ ಯಾವುದೇ ಹೆಚ್ಚುವರಿ ಹಣ ನೀಡಲಾಗುವುದಿಲ್ಲ.

39) ಮೇಲೆ ಹೇಳಿದ ಟೆಂಡರ್ ನಿಯಮಗಳಿಗೆ ಒಪ್ಪದೇ ಇದ್ದ ಟೆಂಡರುದಾರರ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

40) ಯಶಸ್ವಿ ಟೆಂಡರುದಾರರು ನಮೂದಿಸಿರುವ ದರದಲ್ಲಿ ಯಾವುದೇ ಕಾರಣದಿಂದ ಅಂದರೆ ಕಾಲ ಹೆಚ್ಚಳ ಹೊಸದರಪಟ್ಟಿಯ ಪ್ರಕಟಣೆ ಮುಂತಾದವು ಅಥವಾ ಇನ್ನ್ಯಾವುದೇ ಕಾರಣದಿಂದ ಅವಧಿ ವಿಸ್ತರಣೆಯಿಂದಲೂ ನಮೂದಿಸಿದ ದರಕ್ಕಿಂತ ಹೆಚ್ಚು ಮಾಡಲಾಗುವುದಿಲ್ಲ.

41) ಕಾರಣಾಂತರಗಳಿಂದ ಯಾವುದೇ ಕೆಲಸವನ್ನು ಪೂರ್ಣವಾಗಿ ನಿಲ್ಲಿಸಬೇಕಾದಲ್ಲಿ ಅಂತಹ ಗುತ್ತಿಗೆದಾರರಿಗೆ ಇ.ಎಂ.ಡಿ. ಹಣವನ್ನು ಮಾತ್ರ ಹಿಂದಿರುಗಿಸಲಾಗುತ್ತದೆ ಮತ್ತು ಈ ಬಗ್ಗೆ ಯಾವುದೇ ರೀತಿ ಪರಿಹಾರ ನೀಡಲಾಗುವುದಿಲ್ಲ.

42) ನಮೂದಿಸಿರುವ ದರವು ಕೆಲಸದ ಸ್ಥಳದ ಸ್ವಚ್ಛ ಮಾಡಿರುವಿಕೆ ಒಳಗೊಂಡಿರಬೇಕು ಮತ್ತು ಈ ದರದಲ್ಲಿ ಎಲ್ಲಾ ಋತುಮಾನ, ಭೂಮಿಯ ಪರಿಸ್ಥಿತಿಗಳಲ್ಲೂ ಕೆಲಸ ಮಾಡಬೇಕು.

43) ಪಿ.ಡಬ್ಲ್ಯೂ.ಡಿ. ದರಪಟ್ಟಿಯಲ್ಲಿ ನಮೂದಿಸಿರುವಂತೆ ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರ ಕಟ್ಟಡದ ಕೆಲಸಕ್ಕೆ ಉಪಯೋಗಿಸಬೇಕು.

44) ಕೆಲಸದ ಜಾಗದಲ್ಲಿ ಶೌಚಾಲಯದ ವ್ಯವಸ್ಥೆಯನ್ನು ಕಾರ್ಮಿಕರಿಗೆ ಮಾಡಿಕೊಡುವುದು ಗುತ್ತಿಗೆದಾರರ ಜವಾಬ್ದಾರಿಯಾಗಿರುತ್ತದೆ.

45) ನಮೂದಿಸಿದ ದರಗಳಲ್ಲಿ ಸಾಮಾಗ್ರಿಗಳ ಬೆಲೆ ಮತ್ತು ಸಾಗಾಣಿಕೆ ವೆಚ್ಚ ಸೇರಿರುತ್ತದೆ ಎಂದು ತಿಳಿಯಲಾಗುವುದು.

46) ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರವೇ ಕೆಲಸದ ಸ್ಥಳದಲ್ಲಿ ದಾಸ್ತಾನು ಮಾಡಬೇಕು, ತಿರಸ್ಕೃತವಾದ ಸಾಮಗ್ರಿಗಳನ್ನು ಕೆಲಸದ ಪ್ರದೇಶದಿಂದ ಕೂಡಲೇ ಸಾಗಿಸಬೇಕು.

47) ಕೆಲಸದ ಸ್ಥಳದಿಂದ ಅನುಪಯೋಗಿ ವಸ್ತುಗಳನ್ನು ಗುತ್ತಿಗೆದಾರರು ತೆಗೆಯದಿದ್ದಲ್ಲಿ ಅಂದಾಜು ವೆಚ್ಚದ ಮೇಲೆ ಶೇಕಡ 0.5ನ್ನು ಬಿಲ್ಲುಗಳಲ್ಲಿ ಕಡಿತಗೊಳಿಸಲಾಗುವುದು.

48) ಟೆಂಡರ್‌ದಾರರು ನಮೂದಿಸಿರುವ ದರಗಳು ಕೆಲಸ ಮಾಡುವ ಸ್ಥಳದಲ್ಲಿ ಕೆಲಸ ಪ್ರಾರಂಭಿಸುವ ಮುನ್ನ ಸದರಿ ಪ್ರದೇಶವನ್ನು ಸಮತಟ್ಟಾಗಿಸುವ ಕೆಲಸವು ಸೇರಿರುತ್ತದೆ ಎಂದು ತಿಳಿಯುವುದು.

49) ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೋಂದಣಿಯನ್ನು ಮಾಡಲಾಗುವುದಿಲ್ಲ.

50) ಷೆಡ್ಯೂಲ್‌ನಲ್ಲಿರುವ ಅಂದಾಜು ವೆಚ್ಚವು ಲೋಕೋಪಯೋಗಿ ಇಲಾಖೆಯ 2006–07ರ ಬೆಂಗಳೂರು ವೃತ್ತದ (ಷೆಡ್ಯೂಲ್ ದರ) ಮಂಜೂರಾದ ದರದಂತಿರುತ್ತದೆ. ಕಟ್ಟಡಗಳ ಅಂದಾಜು ವೆಚ್ಚವನ್ನು 2006–07ನೇ ಸಾಲಿನ ಲೋಕೋಪಯೋಗಿ ಇಲಾಖೆಯ ಷೆಡ್ಯೂಲ್ ದರದಲ್ಲಿ ಮಂಜೂರು ಮಾಡಲ್ಪಟ್ಟಿರುತ್ತದೆ. ಯಾವುದೇ ಕಾರಣದಿಂದ 2007–08ನೇ ಸಾಲಿಗೆ ಸದರಿ ಕೆಲಸ ಮುಂದುವರಿದಲ್ಲಿ (ಅಂದರೆ ಆರು ತಿಂಗಳ ಗಡುವಿನೊಳಗೆ) 2006–07ನೇ ಸಾಲಿನ ದರದಂತೆ ಮಂಜೂರಾದ ಅಂದಾಜು ಪಟ್ಟಿಯ ದರಗಳ ಪ್ರಕಾರವೇ ಕಾರ್ಯ ನಿರ್ವಹಿಸಬೇಕಾಗುತ್ತದೆ.

51) ಟೆಂಡರ್ ಕುರಿತಾದ ನ್ಯಾಯಿಕ ವ್ಯಾಜ್ಯ ಸಂದರ್ಭ ಉದ್ಭವಿಸಿದಲ್ಲಿ ಬೆಂಗಳೂರು ನಗರ ಸಿವಿಲ್ ನ್ಯಾಯಾಲಯ ವ್ಯಾಜ್ಯ ವ್ಯಾಪ್ತಿಯ ನ್ಯಾಯಾಲಯವಾಗಿರುತ್ತದೆ.

52) ಕರ್ನಾಟಕ ಮಾರಾಟ ತೆರಿಗೆ ಅಡಿಯಲ್ಲಿ ನೋಂದಣಿದಾರರಲ್ಲದವರು ಟೆಂಡರ್‌ನಲ್ಲಿ ಭಾಗವಹಿಸುವಂತಿಲ್ಲ, ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (Sales Tax Clearance Certificate) ಲಗತ್ತಿಸಬೇಕು.

53) ಸೂರ್ಯೋದಯಕ್ಕೆ ಮುಂಚೆ ಹಾಗೂ ಸೂರ್ಯ ಮುಳುಗಿದ ನಂತರ ಯಾವುದೇ ರೀತಿಯ ನಿರ್ಮಾಣ ಕಾರ್ಯಗಳನ್ನು ಗುತ್ತಿಗೆದಾರರು ಮಾಡಬಾರದು.

ಅರಣ್ಯ ಕೃಷಿಕರು,
ಕೇಂದ್ರ ವಲಯ, ಬೆಂಗಳೂರು.

ಪಿ.ಆರ್. 621

## ಜಲ ಸಂಪನ್ಮೂಲ ಇಲಾಖೆ

### ಕಾರ್ಯಪಾಲಕ ಅಭಿಯಂತರರ ಕಛೇರಿ, ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ

### ಟೆಂಡರ್ ಅವಧಿ ವಿಸ್ತರಣೆ ಪ್ರಕಟಣೆ

ನಂ. ಕಾ.ಇಂ/ಬಿ.ಡಿ.ಎನ್-4/ಟೆಂಡರ್/ಪಿ.ಬಿ-3/2006-07/2445/13, ದಿನಾಂಕ: 25ನೇ ಸೆಪ್ಟೆಂಬರ್ 2006

ವಿಷಯ: ಗೊಂದಿ ಯೋಜನೆಯ ಟೆಂಡರ್ ಕಾಮಗಾರಿಗಳು.

ಉಲ್ಲೇಖ: 1. ಈ ಕಛೇರಿಯ ಟೆಂಡರ್ ಪ್ರಕಟಣೆ ಸಂಖ್ಯೆ ಕಾ.ಇಂ/ಬಿಡಿಎನ್-4/ಪಿ.ಬಿ.-3/ಟೆಂಡರ್ ಪ್ರಕಟಣೆ/2006-07 407 ದಿನಾಂಕ: 9.5.06

2. ಈ ಕಛೇರಿಯ ಟೆಂಡರ್ ಅವಧಿ ವಿಸ್ತರಣೆ ಸಂಖ್ಯೆ ಕಾ.ಇಂ/ಬಿಡಿಎನ್-4/ಪಿ.ಬಿ.-3/ಟೆಂಡರ್ ಪ್ರಕಟಣೆ/2006-07/2 ದಿನಾಂಕ: 7.6.06.

3. - " - ನಂ. 1070/11 ದಿನಾಂಕ 22.6.2006.

4. - " - ನಂ. 1818/13 ದಿನಾಂಕ 28.7.2006.

5. - " - ನಂ. 2153/13 ದಿನಾಂಕ 25.8.2006.

ಮೇಲ್ಕಂಡ ಉಲ್ಲೇಖಿತ ಪತ್ರದಲ್ಲಿ ಈ ಕಛೇರಿಯಿಂದ ಪ್ರಕಟಿಸಲಾದ ಗೊಂದಿ ಯೋಜನೆಯ ನಿರ್ವಹಣಾ ಟೆಂಡರ್ ಕಾಮಗಾರಿಗಳಿಗೆ ಸಂಬಂಧಿಸಿದಂತೆ, ಪ್ರಕಟಿಸಿದ ಟೆಂಡರ್‌ಗಳಿಗೆ ಈ ಕೆಳಕಂಡಂತೆ ಟೆಂಡರ್ ಅವಧಿ ವಿಸ್ತರಣೆ ಮಾಡಲಾಗಿದೆ.

1. ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿ: 2.11.06 ಸಂಜೆ 5.30 ರವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: 4.11.06 ಸಂಜೆ 5.30 ರವರೆಗೆ
3. ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: 6.11.06 ಸಂಜೆ 4.00 ರವರೆಗೆ

ಟೆಂಡರ್ ಫಾರಂಗಳನ್ನು ದಿ:6.11.06 ಸಂಜೆ 4.30 ಘಂಟೆಗೆ ಅಥವಾ ಇನ್ನಾವುದೇ ದಿನದಂದು ಕಛೇರಿಯಲ್ಲಿ ಹಾಜರಿರುವ ಟೆಂಡರ್‌ದಾರರ ಅಥವಾ ಇನ್ನಾವುದೇ ನೊಂದಾಯಿತ ಗುತ್ತಿಗೆದಾರರ ಸಮಕ್ಷಮದಲ್ಲಿ ತೆರೆಯಲಾಗುವುದು.

ಉಳಿದ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಎಸ್.ಹೆಚ್. ಮಂಜಪ್ಪ
ಕಾರ್ಯಪಾಲಕ ಅಭಿಯಂತರರು, ನಂ.4,
ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

ಪಿ.ಆರ್. 614

## ಕರ್ನಾಟಕ ಲೋಕಸೇವಾ ಆಯೋಗ

### ಲೋಕಸೇವಾ ಆಯೋಗದ ಕಛೇರಿ "ಉದ್ಯೋಗ ಸೌಧ" ಬೆಂಗಳೂರು

### ತಿದ್ದುಪಡಿ

ಸಂಖ್ಯೆ: ಇಪ(2) 530-532 /2006-07/ಪಿಎಸ್‌ಸಿ, ದಿನಾಂಕ: 3ನೇ ಸೆಪ್ಟೆಂಬರ್ 2006

ಆಯೋಗದ ಅಧಿಸೂಚನೆ ಸಂಖ್ಯೆ:ಇಪ(1)890/2006-07/ಪಿಎಸ್‌ಸಿ ದಿನಾಂಕ: 16.8.2006ರ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶ ಪ್ರಕಟಿಸಿದ್ದು ಅದರಲ್ಲಿ ಬೆಂಗಳೂರು ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್ 'ಎ' ರ ಅಡಿಯಲ್ಲಿ ಎಸ್.ಎ.ಎಸ್. ಭಾಗ-3 ವಿಷಯದ ಶೀರ್ಷಿಕೆಯ ಕೆಳಗೆ ಪ್ರಥಮ ದರ್ಜೆ ಫಲಿತಾಂಶದಡಿಯಲ್ಲಿನ ನೋಂದಣಿ ಸಂಖ್ಯೆಗಳೊಂದಿಗೆ ನೋಂದಣಿ ಸಂಖ್ಯೆ: 51360ನ್ನು ಹಾಗೂ ಅಪೆಂಡಿಕ್ಸ್ 'ಬಿ' ರ ಅಡಿಯಲ್ಲಿ ಎಸ್.ಎ.ಎಸ್. ಭಾಗ-3 ವಿಷಯದ ಕೆಳಗೆ ಇರುವ ನೋಂದಣಿ ಸಂಖ್ಯೆಗಳೊಂದಿಗೆ 50087 ಮತ್ತು 50286ಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ ಹಾಗೂ ನಿಯಂತ್ರಕರು
ಇಲಾಖಾ ಪರೀಕ್ಷೆಗಳು
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

ಪಿ.ಆರ್. 607

ಅರಣ್ಯ ಇಲಾಖೆ

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು

ಅರಣ್ಯ ಕಾಮಗಾರಿಗಳ ಅಲ್ಪಾವಧಿ ಮರು ಟೆಂಡರ್ ಪ್ರಕಟಣೆ

ಸಂಖ್ಯೆ: ಎ1/ಬರಾಉ/ಬಿಯುಡಿ/ಸಿಆರ್-35/2006-07, ದಿನಾಂಕ: 13ನೇ **ಅಕ್ಟೋಬರ್** 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2006 - 2007ನೇ ಸಾಲಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು ವಿಭಾಗದ ವ್ಯಾಪ್ತಿಗೊಳಪಟ್ಟಿರುವ ವಲಯಗಳಲ್ಲಿ ಕಾಲಬದ್ಧ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು 2006 - 2007ನೇ ಸಾಲಿಗೆ ನೊಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಪ್ರತಿಯೊಂದು ಕಾಮಗಾರಿಗಳಿಗೆ ಪ್ರತ್ಯೇಕ ಟೆಂಡರ್ ಕರೆಯಲಾಗಿದೆ.

ದಿನಾಂಕ: 30/10/2006 ರಂದು 3.00 ಗಂಟೆಯೊಳಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು ಅದೇ ದಿನ ಕೆಳಗೆ ಸಹಿ ಮಾಡಿದವರು ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟವರು ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್ ಲಕೋಟೆಯನ್ನು 4.00 ಗಂಟೆಗೆ ತೆರೆಯುವರು ಮತ್ತು ಸದರಿ ದಿನಾಂಕದಂದು ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 04/11/2006 ರಂದು ಸಂಜೆ 3.00 ಗಂಟೆಗೆ ಎರಡನೇ ಬಾರಿಗೆ ನೊಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಬಗ್ಗೆ ಮತ್ತೇ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.

ಟೆಂಡರ್ ನಮೂನೆಗಳನ್ನು ದಿನಾಂಕ: 28/10/2006 ರಂದು 1.00 ಗಂಟೆಯವರೆಗೆ ಕಛೇರಿ ವೇಳೆಯಲ್ಲಿ ನೀಡಲಾಗುವುದು. ಒಂದು ಟೆಂಡರ್ ಫಾರಂನ ಬೆಲೆ ರೂ. 100.00 (ತೆರಿಗೆ ಸೇರಿ). ಒಂದೊಂದು ಕೆಲಸಕ್ಕೆ ಸಂಚಕಾರ ಠೇವಣಿಯನ್ನು ಡಿಡಿ ರೂಪದಲ್ಲಿ ಶೆಡ್ಯೂಲ್ ಕಾಲಂ ಸಂಖ್ಯೆ: 6 ರಲ್ಲಿರುವಂತೆ ಪ್ರತ್ಯೇಕವಾಗಿ ಯಾವುದಾದರು ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದು ಟೆಂಡರ್ ನಮೂನೆಯೊಂದಿಗೆ ಲಗತ್ತಿಸಬೇಕು. ಹೆಚ್ಚಿನ ವಿವರಗಳಿಗೆ ಈ ಕಛೇರಿಯ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ ಮತ್ತು ಎರಡನೇ ಬಾರಿಗೆ ಟೆಂಡರ್ ನಡೆಯಬಹುದಾದ ಸಂದರ್ಭದಲ್ಲಿ ಟೆಂಡರ್ ನಮೂನೆಗಳನ್ನು ದಿನಾಂಕ: 03/11/2006 ರಂದು 1.00 ಗಂಟೆಯವರೆಗೆ ಪಡೆಯಬಹುದಾಗಿದೆ.

ಷೆಡ್ಯೂಲ್

| ಕ್ರ. ಸಂ | ವಲಯ | ಕಾಮಗಾರಿಗಳ ವಿವರ | ಭೌತಿಕ ಪರಿಮಾಣ ಹೆಕ್ಟೇರ್: cum | ಅಂದಾಜು ಮೊತ್ತ (ಲಕ್ಷ ಗಳಲ್ಲಿ) | ನಿಗಧಿ ಪಡಿಸಿದ ಇಎಂಡಿ ಮೊತ್ತ | ಕೆಲಸ ಮುಕ್ತಾಯ ಗೊಳಿಸುವ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | Bannner ghatta<br><br>Harohalli | **a. Excavation of New EPT**<br>Excavation of Elephant-proof trench of size top width 3.0 m bottom 1.0m and vertical depth 2.0 M. with an initial lead up to 2 M and depositing the excavated soil uniformly over the inner side of the elephant-proof trench and forming conical mound of height 1.5m including manually compacting the mound by deploying JCB / Hitachi excavators. | 21250 Cum<br><br>12917 Cum | 7.65<br><br>4.65 | 20000<br><br>12000 | 30.01.2007<br><br>30.01.2007 | |
| 2 | Anekal<br><br>Bannner Ghatta<br><br>Harohalli | **b. Repairs to Elephant-proof Trenches [Maintenance of Existing EPT]:**<br>Repair of damaged elephant proof trenches of size 3.00 m top width, 1.00 m bottom width and vertical depth of 2 m. manually by excavating the filled up earth / silt and dumping on the mound along with formation of the mound, including removal of weed growth inside EPT and on the mound | 4889 Cum<br><br>5215 Cum<br><br>4890 Cum | 1.63<br><br>1.74<br><br>1.63 | 4100<br><br>4400<br><br>4100 | 30.01.2007<br><br>30.01.2007<br><br>30.01.2007 | |
| 3 | Bannner Ghatta<br>Harohalli | c. Construction of Elephant proof Trench gates | 1 No.<br>1 No. | 0.50<br>0.50 | 1300<br>1300 | 30.01.2007<br>30.01.2007 | |
| 4 | Banner Ghatta | d. Erection of Solar fencing | 6 kms. | 9.00 | 23000 | 30.01.2007 | |
| 5 | Anekal | a. Construction of Rubble Wall | 600 Cum | 2.084 | 5300 | 30.01.2007 | |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| | Bannner<br>Ghatta<br>Harohalli | Construction of Rubble Wall | 600 Cum<br><br>600 Cum | 2.084<br><br>2.084 | 5300<br><br>5300 | 30.01.2007<br><br>30.01.2007 | |
| 6 | Anekal<br>Bannner<br>Ghatta<br>Harohalli | a. Formation of Nalabund | 2 Nos.<br>2 Nos.<br><br>2 Nos. | 2.00<br>2.00<br><br>2.00 | 5000<br>5000<br><br>5000 | 30.01.2007<br>30.01.2007<br><br>30.01.2007 | |
| 7 | Anekal<br>Bannner<br>Ghatta<br>Harohalli | a. Construction of Gully Checks | 210 Cum<br>210 Cum<br><br>210 Cum | 0.50<br>0.50<br><br>0.50 | 1300<br>1300<br><br>1300 | 30.01.2007<br>30.01.2007<br><br>30.01.2007 | |
| 8 | Anekal<br><br>Bannner<br>Ghatta<br>Harohalli | a. Purchase of Classic Crackers (Bombs) | 1829<br>Box<br>1829 Box<br><br>1829 Box | 0.75<br><br>0.75<br><br>0.75 | 1900<br><br>1900<br><br>1900 | 30.11.2006<br><br>30.11.2006<br><br>30.11.2006 | |
| 9 | Anekal | a. Creation of Large Size Pond in scare city area in Mysore Elephant Reserve to ensure water availability to elephants in dry months to prevent straying of Elephants in human localities. | 1 No. | 2.50 | 6250 | 31.12.2006 | |
| 10 | Banner<br>Ghatta | a. Construction of Causeway | 1 No. | 2.00 | 5000 | 31.12.2006 | |
| 1 | Anekal<br>Banner<br>Ghatta<br>Haroahlli | a. Construction of Rubble wall along the boundary to control elephant menace (new construction) | 435 Cum<br>507 Cum<br><br>507 Cum | 1.50<br>1.75<br><br>1.75 | 3750<br>4375<br><br>4375 | 31.03.2007<br>31.03.2007<br><br>31.03.2007 | |
| 2 | Anekal<br>Banner<br>Ghatta<br>Haroahlli | a. Construction of SS Masonry wall with vents/ploes with spikes | 1 No.<br>1 Nos<br><br>2 Nos | 1.00<br>1.00<br><br>2.00 | 2500<br>2500<br><br>5000 | 31.03.2007<br>31.03.2007<br><br>31.03.2007 | |
| 3 | Anekal<br>Banner<br>Ghatta<br>Haroahlli | a. Erection of Elephant Proof gate | 1 No.<br>1 No.<br><br>1 No. | 1.00<br>1.00<br><br>1.00 | 2500<br>2500<br><br>2500 | 31.03.2007<br>31.03.2007<br><br>31.03.2007 | |
| 4 | Anekal<br>Banner<br>Ghatta<br>Haroahlli | a. Construction of Nala bund | 2 Nos<br>2 Nos<br><br>2 Nos | 2.00<br>2.00<br><br>2.00 | 5000<br>5000<br><br>5000 | 31.03.2007<br>31.03.2007<br><br>31.03.2007 | |
| 5 | Anekal<br>Banner<br>Ghatta<br>Haroahlli | a. Cnstruction of Gully Checks | 694 Cum<br>694 Cum<br>694 Cum | 1.665<br>1.665<br><br>1.665 | 4200<br>4200<br><br>4200 | 31.03.2007<br>31.03.2007<br><br>31.03.2007 | |
| 6 | Anekal<br>Banner<br>Ghatta<br>Haroahlli | a. Plugging of Breached Earthen Dams | 2 Nos<br>2 Nos<br><br>2 Nos | 1.00<br>1.00<br><br>1.00 | 2500<br>2500<br><br>2500 | 31.03.2007<br>31.03.2007<br><br>31.03.2007 | |
| 7 | Anekal<br>Banner<br>Ghatta<br>Haroahlli | a. Deepening of Natural Water tanks to store more water to provide water for the elephant & other wild animals | 2 Nos<br>1 No.<br><br>2 Nos | 1.00<br>0.50<br><br>1.00 | 2500<br>1250<br><br>2500 | 31.03.2007<br>31.03.2007<br><br>31.03.2007 | |

ನಿಬಂಧನೆಗಳು

1) ಟೆಂಡರ್ ಫಾರಂಗಳನ್ನು ಪ್ರತಿ ಫಾರಂಗೆ ರೂ. 100.00 (ತೆರಿಗೆ ಸೇರಿ) ರಂತೆ ಪಾವತಿ ಮಾಡಿ ದಿನಾಂಕ: 28/10/2006 ರವರೆಗೆ ಕಛೇರಿ ಕೆಲಸದ ವೇಳೆಯಲ್ಲಿ 1.00 ಗಂಟೆವರೆಗೆ ಪಡೆಯತಕ್ಕದ್ದು ಮತ್ತು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2006–2007ನೇ ಸಾಲಿಗೆ ತಮ್ಮ ಗುತ್ತಿಗೆಯನ್ನು ನೊಂದಾಯಿಸಿಕೊಂಡಿರಬೇಕು. ತಪಿದ್ದಲ್ಲಿ ಅಂತಹವರ ಟೆಂಡರ್‌ನ್ನು ಪರಿಗಣಿಸಲಾಗುವುದಿಲ್ಲ.
2) ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ವಲಯವಾರು ಮತ್ತು ಕೆಲಸವಾರು ಮೊಹರು ಮಾಡಿ ಸಲ್ಲಿಸುವುದು.
3) ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು 30/10/2006 ರಂದು ಸಂಜೆ 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು ಅಥವಾ ಅವರಿಂದ ನಿಯೊಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಕಾರಣಾಂತರದಿಂದ ಟೆಂಡರ್

ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 04/11/2006 ರಂದು ಸಂಜೆ 3.00 ಗಂಟೆಗೆ ಎರಡನೇ ಬಾರಿಗೆ ನೊಂದಾಯಿತ ಇಚ್ಚೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು. ಈ ಬಗ್ಗೆ ಮತ್ತೇ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.

4) ಈ ಅರಣ್ಯ ಕಾಮಗಾರಿಗಳು ಕಾಲಬದ್ಧ ಕೆಲಸಗಳಾಗಿರುತ್ತದೆ ಮತ್ತು ತುರ್ತು ಕೆಲಸಗಳಾಗಿರುವುದರಿಂದ ಈ ಎಲ್ಲಾ ಕೆಲಸಗಳನ್ನು ಆಯಾ ವಲಯ ಅರಣ್ಯ ಅಧಿಕಾರಿಗಳ ನಿರ್ದೇಶನ ಮತ್ತು ಮೇಲಾಧಿಕಾರಿಗಳ ನಿರ್ದೇಶನದಂತೆಯೂ ಜಾರಿಗೊಳಿಸಲು ಬದ್ಧರಾಗಿರಬೇಕು. ಮೇಲಿನ ಕೆಲಸಗಳು ಕಾಲಬದ್ಧವಾಗಿದ್ದು ಒಂದು ಪಕ್ಷ ಯಾವುದಾದರೂ ವಲಯದಲ್ಲಿ ಟೆಂಡರ್‌ಗೆ ಮುಂಚೆ ಕೆಲಸಗಳನ್ನು ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳು ಈ ಪ್ರಕಟಣೆಯಿಂದ ಹೊರತುಪಡಿಸಿದವುಗಳಾಗಿರುತ್ತವೆ ಮತ್ತು ಸ್ಥಳ ಬದಲಾವಣೆಯಾದರೂ ಸಹ ಕೆಲಸಗಳನ್ನು ಗುರುತುಪಡಿಸಿಕೊಟ್ಟ ಸ್ಥಳದಲ್ಲಿ ಪೂರ್ಣಗೊಳಿಸಬೇಕಾಗುತ್ತದೆ.

5) ಪ್ರತಿ ಟೆಂಡರ್‌ದಾರರು ಈ ಕಾಮಗಾರಿಗಳನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವಾಹನಗಳ ವ್ಯವಸ್ಥೆಯನ್ನು ಸ್ವಂತವಾಗಿ ಮಾಡಿಕೊಳ್ಳಬೇಕು ಮತ್ತು ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿ ಕಾಮಗಾರಿಗಳನ್ನು ನಿರ್ವಹಿಸಲು ಟೆಂಡರುದಾರರು ನಿಯೋಜಿಸುವ ದಿನಗೂಲಿ ಆಳುಗಳಿಗೆ ಕಾಡು ಪ್ರಾಣಿಗಳಿಂದ ಏನಾದರೂ ತೊಂದರೆಯಾದಲ್ಲಿ ಟೆಂಡರುದಾರರ ಜವಬ್ದಾರಿಯಾಗಿರುತ್ತದೆ. ಇದಕ್ಕೆ ಇಲಾಖೆಯಿಂದ ಯಾವುದೇ ಪರಿಹಾರ ಧನವನ್ನು ನೀಡಲಾಗುವುದಿಲ್ಲ. ತೊಂದರೆಗಳು ಬರದಂತೆ ಎಲ್ಲಾ ರೀತಿಯ ಎಚ್ಚರಗಳನ್ನು ಟೆಂಡರುದಾರರು ಮುಂಚಿತವಾಗಿಯೇ ತೆಗೆದುಕೊಳ್ಳಬೇಕು. ಇದನ್ನು ಕಟ್ಟುನಿಟ್ಟಾಗಿ ಇಲಾಖೆಯ ಅಧಿಕಾರಿಗಳ ನಿರ್ದೇಶನಗಳಂತೆ ಟೆಂಡರುದಾರರು ಎಚ್ಚರಿಕೆ ವಹಿಸಿಕೊಳ್ಳಬೇಕು ಮತ್ತು ಇದನ್ನೆಲ್ಲ ಅರಿತು ನೀವು ಟೆಂಡರ್‌ನ್ನು ಪಡೆಯಬಹುದಾಗಿರುತ್ತದೆ. ಅಲ್ಲದೆ ರಕ್ಷಿತ ಅರಣ್ಯ ಪ್ರದೇಶದಲ್ಲಿ ಟೆಂಡರುದಾರರು ಕೆಲಸ ನಿರ್ವಹಿಸುವ ಅವಧಿಯಲ್ಲಿ ಟೆಂಡರುದಾರರಾಗಲಿ ಅಥವಾ ಅವರಿಂದ ನಿಯೋಜನೆಗೊಂಡ ದಿನಗೂಲಿ ಆಳುಗಳಾಗಲಿ ಅಥವಾ ಅವರಿಗೆ ಸಂಬಂಧಪಟ್ಟವರಾಗಲಿ ಕರ್ನಾಟಕ ಅರಣ್ಯ ಕಾಯ್ದೆ 1963 ಮತ್ತು ವನ್ಯಜೀವಿ ರಕ್ಷಣಾ ಕಾಯ್ದೆ 1972ನ್ನು ಉಲ್ಲಂಘನೆ ಮಾಡತಕ್ಕದ್ದಲ್ಲ.

6) ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಚಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗಧಿಪಡಿಸಿರುವ ಇಎಂಡಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಡಿಡಿ ರೂಪದಲ್ಲಿ ಪಡೆದು ಪಾವತಿಸಬೇಕಾಗುತ್ತದೆ.

7) ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸದಿದ್ದಲ್ಲಿ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು ಮತ್ತು ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ವೃತ್ತ, ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ.

8) ನಿಗಧಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.

9) ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು ಇವರು ಕಾಯ್ದಿರಿಸಿಕೊಂಡಿರುತ್ತಾರೆ.

10) ಷೆಡ್ಯೂಲ್‌ನಲ್ಲಿ ಸೂಚಿಸಿರುವ ಕಾಮಗಾರಿ ಅನುಷ್ಠಾನ ಸಂಬಂಧ ಹಣ ಪಾವತಿಸುವುದು ಆಯಾ ಯೋಜನೆಗಳಡಿ ಬಿಡುಗಡೆಗೊಳ್ಳುವ ಅನುದಾನ ಹಾಗೂ ಅನುಮೋದನೆಯ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.

11) ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯ ಅಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಕ್ಷೇತ್ರ ಟಿಪ್ಪಣಿ ಪುಸ್ತಕದೊಂದಿಗೆ (ಎಫ್‌ಎನ್‌ಬಿ / ಎಂಬಿ) ಹಣ ಪಾವತಿಗೆ ಒಪ್ಪಿಸಬೇಕಾಗುತ್ತದೆ ಮತ್ತು ಬಿಲ್ ಹಣ ಸಂದಾಯ ಮಾಡುವಾಗ ಬಿಲ್‌ಗಳಲ್ಲಿ ನಿಯಮದಂತೆ 2% ಆದಾಯ ತೆರಿಗೆ ಮತ್ತು ಆದಾಯ ತೆರಿಗೆ ಮೇಲೆ 2% ಸರ್‌ಚಾರ್ಜ್‌ನ್ನು ಹಾಗೂ 12.5% ವ್ಯಾಟ್ & 5% ಠೇವಣಿ ಹಣವನ್ನು ಕಡಿತಗೊಳಿಸಿ ಮತ್ತು ಆಗಿಂದಾಗ್ಗೆ ತೆರಿಗೆಗಳು ವ್ಯತ್ಯಾಸವಾದರೂ ಸಹ ನಿಯಮದಂತೆ ಕಡಿತಗೊಳಿಸಲಾಗುವುದು.

12) ಕೆಲಸಗಳು ನಿರ್ವಹಿಸುವಾಗ ಇತರೆ ಮರಗಿಡಗಳಿಗೆ, ವನ್ಯಜೀವಿಗಳಿಗೆ ಮತ್ತು ಯಾವುದೇ ಇತರೆ ಅರಣ್ಯ ಸಂಪತ್ತಿಗೆ ನಷ್ಟ ಉಂಟು ಮಾಡಿದ್ದಲ್ಲಿ ಸರ್ಕಾರಕ್ಕೆ ಆದ ನಷ್ಟವನ್ನು ಸಂಬಂಧಪಟ್ಟ ಗುತ್ತಿಗೆದಾರರಿಂದ ವಸೂಲು ಮಾಡಲಾಗುವುದು ಅಥವಾ ಬಿಲ್ಲುಗಳಲ್ಲಿ ಕಟಾವು ಮಾಡಲಾಗುವುದು.

13) ಕೆಲಸಗಳನ್ನು ಸಮರ್ಪಕವಾಗಿ ನಿರ್ವಹಿಸಲು ವಿಫಲವಾದರೆ ಅಥವಾ ನಿಗಧಿ ಪಡಿಸಿದ ಪರಿಮಾಣದಲ್ಲಿ ಕೆಲಸಗಳನ್ನು ನಿರ್ವಹಿಸದಿರುವುದು ಕಂಡು ಬಂದರೆ ಅಂತಹ ಗುತ್ತಿಗೆಯನ್ನು ರದ್ದುಪಡಿಸಿ, ಇಲಾಖಾ ಮುಖಾಂತರ ಕೆಲಸಗಳನ್ನು ಗುತ್ತಿಗೆದಾರರ ವೆಚ್ಚದಲ್ಲಿ ನಿರ್ವಹಿಸಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಪೂರ್ಣ ಅಧಿಕಾರವನ್ನು ಹೊಂದಿರುತ್ತಾರೆ.

14) ಎಲ್ಲಾ ಕೆಲಸಗಳ ವಿವರಗಳು ಮತ್ತು ಅಂದಾಜು ಪಟ್ಟಿಯ ವಿವರ ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳ ಬಹುದಾಗಿದೆ.

15) ಟೆಂಡರ್‌ನಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು "ಕರ್ನಾಟಕ ಸಾರ್ವಜನಿಕ ಸಂಗ್ರಹಣದಲ್ಲಿ ಪಾರದರ್ಶಕತೆ ಕಾಯ್ದೆ 1999" ಕಲಂ 27(1)(ಎ) ದಂತೆ ಮೇಲೆ ನಮೂದಿಸಿದ ರೀತಿಯ ಕೆಲಸಗಳನ್ನು ಕರ್ನಾಟಕ ಅರಣ್ಯ ಇಲಾಖೆಯ ಯಾವುದೇ ವಿಭಾಗದಲ್ಲಿ ಕನಿಷ್ಠ ಒಂದು ವರ್ಷ ಸಮರ್ಪಕವಾಗಿ ನಿರ್ವಹಿಸಿದ ಅನುಭವ ಹೊಂದಿರಬೇಕು ಹಾಗೂ ಈ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಂದ ಧೃಢೀಕೃತ ಪ್ರಮಾಣ ಪತ್ರವನ್ನು ಒದಗಿಸಬೇಕು.
16) ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡೀಫಾಲ್ಟರ್ ಆಗಿದ್ದರೆ ಅಥವಾ ಕಪ್ಪು ಪಟ್ಟಿಯಲ್ಲಿರುವ ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
17) ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿ ಅಥವಾ ಪ್ರತಿನಿಧಿ ಸದರಿ ಕಾಮಗಾರಿಗಳನ್ನು ನೋಡಬಯಸಿದ್ದಲ್ಲಿ ಅದಕ್ಕೆ ಅನುವು ಮಾಡಿಕೊಡಬೇಕು.
18) ಸಾರ್ವತ್ರಿಕ ರಜೆ ದಿನಗಳಲ್ಲಿ ಕೆಲಸ ಮಾಡಬೇಕಾದರೆ, ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಅನುಮತಿಯನ್ನು ಬರವಣಿಗೆಯಲ್ಲಿ ಪಡೆಯತಕ್ಕದ್ದು.
19) ಕಾಮಗಾರಿಗಳನ್ನು ಕೈಗೊಳ್ಳುವಾಗ ಟೆಂಡರುದಾರರಿಂದ ಇಲಾಖೆಗೆ ಯಾವುದಾದರೂ ಪರಿಹಾರ: ದಂಡ ಬಾಕಿ ಬರಬೇಕಾಗಿದ್ದಲ್ಲಿ ಅದನ್ನು ಅವರ ಹೆಸರಿನಲ್ಲಿರುವ ಭದ್ರತಾ ಠೇವಣಿಯಲ್ಲಿ ಮುರಿದುಕೊಳ್ಳಲಾಗುವುದು.
20) ಬಿಲ್ಲುಗಳನ್ನು ಪಾವತಿಗೆ ಸಲ್ಲಿಸುವಾಗ ನಿಗಧಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು.
21) ಟೆಂಡರ್‌ದಾರರಿಗೆ ನೀಡಲಾದ ಮಾದರಿ ಮತ್ತು ವಿವರಣೆಯಲ್ಲಿ ಬದಲಾವಣೆಗಳನ್ನು ಮಾಡಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಅವಕಾಶ ಅಧಿಕಾರವಿರುತ್ತದೆ.
22) ಕೆಲಸದ ಅವಧಿಯ ವಿಸ್ತರಣೆ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು ಇವರು ನೀಡಿದ ಆದೇಶವೇ ಅಂತಿಮವಾಗಿದ್ದು, ಇದನ್ನು ಎಲ್ಲಾ ಟೆಂಡರುದಾರರು ಒಪ್ಪಿಕೊಳ್ಳಲು ಬದ್ಧರಾಗಿರಬೇಕು.
23) ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು ಇವರ ಪೂರ್ವಾನುಮತಿ ಇಲ್ಲದೆ ಬೇರೆಯವರಿಗೆ ಗುತ್ತಿಗೆದಾರರು ವಹಿಸಿಕೊಟ್ಟಲ್ಲಿ ಕೆಲಸದ ಆದೇಶವನ್ನು ರದ್ದುಪಡಿಸುವುದಲ್ಲದೆ ಇ.ಎಂ.ಡಿ ಮತ್ತು ಭದ್ರತಾ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
24) ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು ರವರ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.
25) ಬಿಲ್ಲಿನ ಹಣವನ್ನು ಯಶಸ್ವಿ ಟೆಂಡರುದಾರರಿಗೆ ಪೂರ್ಣಗೊಂಡ ಕೆಲಸಕ್ಕೆ ಕ್ರಾಸ್ಡ್ ಚೆಕ್ ಮೂಲಕ ನೀಡಲಾಗುವುದು.
26) ಟೆಂಡರುದಾರರು ನಮೂದಿಸುವ ದರವು ನಿಯಮಾವಳಿಗಳ ಪ್ರಕಾರ ತೆರಿಗೆ ದರವನ್ನು ಒಳಗೊಂಡಿರಬೇಕು. ಈ ಬಗ್ಗೆ ಗುತ್ತಿಗೆದಾರರಿಗೆ ಯಾವುದೇ ಹೆಚ್ಚುವರಿ ಹಣ ನೀಡಲಾಗುವುದಿಲ್ಲ.
27) ಮೇಲೆ ಹೇಳಿದ ಟೆಂಡರ್ ನಿಯಮಗಳಿಗೆ ಒಪ್ಪದೇ ಇದ್ದ ಟೆಂಡರುದಾರರ ಟೆಂಡರ್‌ನ್ನು ತಿರಸ್ಕರಿಸಲಾಗುವುದು.
28) ಯಶಸ್ವಿ ಟೆಂಡರುದಾರರು ನಮೂದಿಸಿರುವ ದರದಲ್ಲಿ ಯಾವುದೇ ಕಾರಣದಿಂದ ಅಂದರೆ ಕಾಲ ಹೆಚ್ಚಳ ಹೊಸದರಪಟ್ಟಿಯ ಪ್ರಕಟಣೆ ಮುಂತಾದವು ಅಥವಾ ಇನ್ನಾವುದೇ ಕಾರಣದಿಂದ ಅವಧಿ ವಿಸ್ತರಣೆಯಿಂದಲೂ ನಮೂದಿಸಿದ ದರಕ್ಕಿಂತ ಹೆಚ್ಚು ಮಾಡಲಾಗುವುದಿಲ್ಲ.
29) ಕಾರಣಾಂತರಗಳಿಂದ ಯಾವುದೇ ಕೆಲಸವನ್ನು ಪೂರ್ಣವಾಗಿ ನಿಲ್ಲಿಸಬೇಕಾದಲ್ಲಿ ಅಂತಹ ಗುತ್ತಿಗೆದಾರರಿಗೆ ಇ.ಎಂ.ಡಿ ಹಣವನ್ನು ಮಾತ್ರ ಹಿಂದಿರುಗಿಸಲಾಗುತ್ತದೆ ಮತ್ತು ಈ ಬಗ್ಗೆ ಯಾವುದೇ ರೀತಿ ಪರಿಹಾರ ನೀಡಲಾಗುವುದಿಲ್ಲ.
30) ನಮೂದಿಸಿರುವ ದರವು ಕೆಲಸದ ಸ್ಥಳದ ಸ್ವಚ್ಛ ಮಾಡಿರುವಿಕೆ ಒಳಗೊಂಡಿರಬೇಕು ಮತ್ತು ಈ ದರದಲ್ಲಿ ಎಲ್ಲಾ ಋತುಮಾನ, ಭೂಮಿಯ ಪರಿಸ್ಥಿತಿಗಳಲ್ಲೂ ಕೆಲಸ ಮಾಡಬೇಕು.
31) ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರವೇ ಕೆಲಸದ ಸ್ಥಳದಲ್ಲಿ ದಾಸ್ತಾನು ಮಾಡಬೇಕು. ತಿರಸ್ಕೃತವಾದ ಸಾಮಗ್ರಿಗಳನ್ನು ಕೆಲಸದ ಪ್ರದೇಶದಿಂದ ಕೂಡಲೇ ಸಾಗಿಸಬೇಕು.
32) ಕೆಲಸದ ಸ್ಥಳದಿಂದ ಅನುಪಯೋಗಿ ವಸ್ತುಗಳನ್ನು ಗುತ್ತಿಗೆದಾರರು ತೆಗೆಯದಿದ್ದಲ್ಲಿ ಅಂದಾಜು ವೆಚ್ಚದ ಮೇಲೆ ಶೇಕಡ 0.5ನ್ನು ಬಿಲ್ಲುಗಳಲ್ಲಿ ಕಡಿತಗೊಳಿಸಲಾಗುವುದು.
33) ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೊಂದಣಿಯನ್ನು ಮಾಡಲಾಗುವುದಿಲ್ಲ.
34) ಟೆಂಡರುದಾರರು 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ವ್ಯಕ್ತಿಗಳನ್ನು ಕೆಲಸಕ್ಕೆ ನಿಯೋಜಿಸಬಾರದು.
35) ಟೆಂಡರ್ ಕುರಿತಾದ ನ್ಯಾಯಿಕ ವ್ಯಾಜ್ಯದ ಸಂದರ್ಭ ಉದ್ಭವಿಸಿದಲ್ಲಿ ಬೆಂಗಳೂರು ನಗರ ಸಿವಿಲ್ ನ್ಯಾಯಾಲಯ ವ್ಯಾಜ್ಯ ವ್ಯಾಪ್ತಿಯ ನ್ಯಾಯಾಲಯವಾಗಿರುತ್ತದೆ.
36) ಕರ್ನಾಟಕ ವೃತ್ತಿ ತೆರಿಗೆ & ಮಾರಾಟ ತೆರಿಗೆ ಅಡಿಯಲ್ಲಿ ನೊಂದಣಿದಾರರಲ್ಲದವರು ಟೆಂಡರ್‌ನಲ್ಲಿ ಭಾಗವಹಿಸುವಂತಿಲ್ಲ, ಮಾರಾಟ ತೆರಿಗೆ / ವೃತ್ತಿ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು ಲಗತ್ತಿಸಬೇಕು.
37) ಸೂರ್ಯೋದಯಕ್ಕೆ ಮುಂಚೆ ಅಥವಾ ಸೂರ್ಯ ಮುಳುಗಿದ ನಂತರ ಯಾವುದೇ ರೀತಿಯ ನಿರ್ಮಾಣ ಕಾರ್ಯಗಳನ್ನು ಗುತ್ತಿಗೆದಾರರು ಮಾಡಬಾರದು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು.

ಪಿ.ಆರ್. 624

## ಕಾರ್ಯಪಾಲಕ ಅಭಿಯಂತರರ ಕಛೇರಿ, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ

### ಟೆಂಡರ್ ಪ್ರಕಟಣೆ

**ನಂ./ಜಿ.ಎನ್.ಎಲ್./ಎನ್.ಐ.ಟಿ./ಯು.ಡಿ.ಎನ್./2006-2007/ಜೇ೩, ದಿನಾಂಕ: 25ನೇ ಸೆಪ್ಟೆಂಬರ್ 2006**

ಈ ಕೆಳಗೆ ಸೂಚಿಸಿದ ಕಾಮಗಾರಿಗಳಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಗುತ್ತಿಗೆದಾರರ ನಿರ್ದಿಷ್ಟ ಫಾರಂನಲ್ಲಿ ಕರ್ನಾಟಕ ಟ್ರಾನ್ಸ್‌ಸ್ಪರೆನ್ಸಿ ಇನ್ ಪಬ್ಲಿಕ್ ಪ್ರೋಕ್ಯೂರ್ಮೆಂಟ್ ಆ್ಯಕ್ಟ್ 2000 ದ ಪ್ರಕಾರ ದ್ವಿ ಲಕೋಟೆ ಪದ್ಧತಿಯಲ್ಲಿ ಮೊಹರಾದ ಐಟಂದರ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಟೆಂಡರಿನ ದ್ವಿಲಕೋಟೆ ಬಿಡ್ ಪದ್ಧತಿ, ತಾಂತ್ರಿಕ ಬಿಡ್ ಹಾಗೂ ವಿತ್ತೀಯ (ಫೈನಾನ್ಸಿಯಲ್) ಬಿಡ್ಡನ್ನು ಒಳಗೊಂಡಿದೆ. ಬಿಡ್‌ಗಳನ್ನು ತಾಂತ್ರಿಕ ಬಿಡ್ ಹಾಗೂ ವಿತ್ತೀಯ ಬಿಡ್ ಎಂದು ಗುರುತು ಹಾಕಿದ ಎರಡು ಪ್ರತ್ಯೇಕ ಮೊಹರಾದ ಲಕೋಟೆಗಳಲ್ಲಿ ಎರಡು ಭಾಗಗಳಲ್ಲಿ ಸ್ವೀಕರಿಸಲಾಗುವುದು. ಈ ಎರಡು ಲಕೋಟೆಗಳಿಗೆ ಮೊಹರು ಮಾಡಿ ಕೆಲಸದ ಶಿರೋನಾಮೆ ನಮೂದಿಸಿ ಇನ್ನೊಂದು ಮೊಹರಾದ ಲಕೋಟೆಯಲ್ಲಿಡಬೇಕು ಮತ್ತು ಬಿಡ್ಡುದಾರರ ಹೆಸರು ಹಾಗೂ ಪೂರ್ತಿ ಅಂಚೆ ವಿಳಾಸದೊಂದಿಗೆ ಕೆಳ ಸಹಿದಾರರಿಗೆ ಕಳುಹಿಸಬೇಕು. ಪೂರ್ತಿಗೊಳಿಸಿದ ಬಿಡ್ಡನ್ನು ಶೆಡ್ಯೂಲ್‌ನಲ್ಲಿ ಒಳಗೊಂಡ ವಿಶೇಷ ನಿಯಮಗಳ ಕೆಪಿಡಬ್ಲ್ಯೂಡಿ ಕೋಡ್ ವಾಲ್ಯೂಂ 2ರ ಫಾರಂನಲ್ಲಿ ಪಿಬ್ಲ್ಯೂಜಿ 65 ಹಾಗೂ 66 ರಲ್ಲಿ ಹಾಗೂ ಕರ್ನಾಟಕ ಟ್ರಾನ್ಸ್‌ಸ್ಪರೆನ್ಸಿ ಇನ್ ಪಬ್ಲಿಕ್ ಪ್ರೋಕ್ಯೂರ್ಮೆಂಟ್ ಆ್ಯಕ್ಟ್ 2000 ದಲ್ಲಿ ನಿರೂಪಿತ ಶರ್ತಗೊಳಪಟ್ಟು ದಿನಾಂಕ 27.10.2006 ರಂದು ಸಂಜೆ 4.00 ಗಂಟೆಯವರೆಗೆ ಕಾರ್ಯಕಾರಿ ಅಭಿಯಂತರರು, ಲೋ.ಇ, ಉಡುಪಿ ವಿಭಾಗ, ಉಡುಪಿ ಇವರು ಸ್ವೀಕರಿಸುವರು. ಈ ಕೆಳಗೆ ಸೂಚಿತ ದಿನಾಂಕದಂದು ತಾಂತ್ರಿಕ ಬಿಡ್ಡನ್ನು ತೆರೆಯಲಾಗುವುದು. ತಾಂತ್ರಿಕ ಬಿಡ್ಡ್‌ನಲ್ಲಿ ಅರ್ಹರಾಗಿರುವ ಬಿಡ್ಡ್‌ದಾರರ ವಿತ್ತೀಯ ಬಿಡ್‌ಗಳನ್ನು ಮಾತ್ರ ತೆರೆಯಲಾಗುವುದು.

ಖಾಲಿ ಟೆಂಡರು ಫಾರಂಗಳಿಗೆ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ) ದಿನಾಂಕ: 26.10.2006 ರವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ಅವರ ರಿಜಿಸ್ಟ್ರೇಶನನ ಸರ್ಟಿಫೈಡ್ ಪ್ರತಿಯನ್ನು ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ಈ ಕಛೇರಿಯಲ್ಲಿ ದಿನಾಂಕ: 26.10.2006 ರಂದು ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊಬಲಗು (ರೂ. ಲಕ್ಷಗಳಲ್ಲಿ) | ಇಎಂಡಿ (ರೂ. ಗಳಲ್ಲಿ) | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಕಾಲಮಿತಿ (ಮಳೆಗಾಲ ಹೊರತು) | ಟೆಂಡರ್ ನಮೂನೆ | ಟೆಂಡರ್ (ಶೆಡ್ಯೂಲ್ ಬೆಲೆ) | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 1. | ಉಡುಪಿ ತಾಲ್ಲೂಕು, ಆವರ್ಸೆ-ಅಮರಕಲ್-ಬೆಳ್ವೆ ರಸ್ತೆ ಅಭಿವೃದ್ಧಿ | 7579081.00 | 75800.00 | 12 ತಿಂಗಳು | ದರವಾರು | 5600/- | 1ನೇ ದರ್ಜೆ |
| 2. | ಉಡುಪಿ ತಾಲ್ಲೂಕು, ಬೈರಂಪಳಿ-ವಡ್ಡ-ಎಳ್ಳಾರು ರಸ್ತೆ ಅಭಿವೃದ್ಧಿ | 8834332.00 | 88400.0 | 12 ತಿಂಗಳು | ದರವಾರು | 5600/- | 1ನೇ ದರ್ಜೆ |

**ಸಾಮಾನ್ಯ ನಿಯಮಗಳು:**

1) ಕೆಲಸದ ಬಿಡ್ಡಿಂಗ್‌ನಲ್ಲಿ ಆಸಕ್ತಿಯುಳ್ಳ ಗುತ್ತಿಗೆದಾರರು ನಗದಾಗಿ ಅಥವಾ ಉಡುಪಿಯಲ್ಲಿ ಪಾವತಿ ಆಗುವಂತೆ ಕಾರ್ಯಕಾರಿ ಅಭಿಯಂತರರು ಉಡುಪಿ ವಿಭಾಗ ಉಡುಪಿ ಅವರ ಹೆಸರಿಗೆ ಪಡೆದ ಡಿಡಿ ರೂಪದಲ್ಲಿ ಪಾತಿಸಬೇಕಾದ ಟೆಂಡರ್ ಶೆಡ್ಯೂಲ್ ಮೌಲ್ಯದೊಂದಿಗೆ (ಇದನ್ನು ಹಿಂದಿರುಗಿಸುವುದಿಲ್ಲ) ಕೆಳಸಹಿದಾರರಿಗೆ ಅರ್ಜಿ ಸಲ್ಲಿಸಬೇಕು. ಅರ್ಜಿ ಜೊತೆ ಗುತ್ತಿಗೆದಾರರ ರಿಜಿಸ್ಟ್ರೇಶನ್ ಸರ್ಟಿಫೈಡ್ ಪ್ರತಿಯೊಂದಿಗೆ ಸಲ್ಲಿಸತಕ್ಕದ್ದು.
2) ಟೆಂಡರಿನಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು ಉದ್ದೇಶಿಸಿರುವ ಕಾಮಗಾರಿಯ ಶೇ. 30 ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ ಐದು ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತ ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
3) ಕಾಮಗಾರಿ ನಿರ್ವಹಿಸುವರೇ, ಬೇಕಾದ ಆರ್ಥಿಕ ಸಾಮರ್ಥ್ಯ ಹೊಂದಿರುವರೇ ಎನ್ನುವ ಬಗ್ಗೆ ಟೆಂಡರ್ ಮೊಬಲಗಿನ ಶೇ. 30ಕ್ಕೆ ಸಮನಾದ ಮೊಬಲಗಿನ (ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ) ಲೈನ್ ಆಫ್ ಕ್ರೆಡಿಟ್‌ನ್ನು ತಪ್ಪದೆ ನೀಡಬೇಕು.
4) ಕಾಮಗಾರಿ ಪೂರ್ತಿಗೊಳಿಸಿದ ಬಳಿಕ ಎರಡು ವರ್ಷಗಳ ಕಾಲ ಯಾವುದೇ ದುರಸ್ತಿ ಕಾರ್ಯ ಬರಬಾರದು. ಈ ಮೇಲಿನಂತೆ ಪ್ರಕಟಿತ ಚಾಚು / ಚೈನೇಜುಗಳಲ್ಲಿ ಈ ಮೇಲಿನಂತೆ ದುರಸ್ತಿ ಅವಧಿಯಲ್ಲಿ (ಡಿಫೆಕ್ಟ್ ಲಯಾಬಿಲಿಟಿ ಅವಧಿ) ಯಾವುದಾರೂ ದುರಸ್ತಿಬೇಕಾದರೆ ಗುತ್ತಿಗೆದಾರ/ವಾಣಿಜ್ಯ ಸಂಸ್ಥೆ, ಅದನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪುನರ್‌ನಿರ್ಮಿಸಿಕೊಡಬೇಕು.
5) ತಾಂತ್ರಿಕ ಬಿಡ್‌ಗಳ ಪುರಾವೆಯಾಗಿ ಲಗ್ತೀಕತ ಎಲ್ಲಾ ದಾಖಲೆಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಿಂತ ಕೆಳಗಿಲ್ಲದ ಶ್ರೇಣಿಯ ಗೆಜೆಟೆಡ್ ಅಧಿಕಾರಿಯವರಿಂದ ದೃಢೀಕರಿಸಿ ಸಲ್ಲಿಸಬೇಕು. ತಪ್ಪಿದರೆ ಬಿಡ್‌ಗಳನ್ನು ಅನರ್ಹಗೊಳಿಸಲಾಗುತ್ತದೆ. ಮೂಲ ದಾಖಲೆಗಳನ್ನು ಯಾವುದೇ ಹಂತದಲ್ಲಿ ಪರಿಶೀಲನಾರ್ಥವಾಗಿ ಕೇಳಿದಾಗ ಹಾಜರುಪಡಿಸಬೇಕು. ಮೂಲ ದಾಖಲೆಗಳನ್ನು ನೀಡಲು ತಪ್ಪಿದರೆ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತದೆ.
6) ತಾಂತ್ರಿಕ ಬಿಡ್‌ನೊಂದಿಗೆ ಸಮಂಜಸವಾದ (ರಿಲೆವೆಂಟ್) ಪ್ರಮಾಣಪತ್ರಗಳು ಹಾಗೂ ವಿವರಗಳನ್ನು ಮಾತ್ರ ಲಗ್ತೀಕರಿಸಬೇಕು. ಕಂಪನಿ:ಏಜೆನ್ಸಿಗಳು / ವಾಣಿಜ್ಯ ಸಂಸ್ಥೆಗಳ:ಪ್ರೊಫೈಲ್ ವಿವರಗಳನ್ನು ಲಗ್ತೀಕರಿಸಬೇಕು.
7) ಶರ್ತ ಬದ್ಧ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.
8) ಈ ಮೇಲಿನ ರಸ್ತೆ ಕೆಲಸವನ್ನು ಎಂ.ಒ.ಆರ್.ಟಿ.ಎಚ್. ಮಾದರಿ ಪ್ರಕಾರವಿರುವ ಪೇವರ್‌ಯುಕ್ತವಾದ (paver finish) ಹಾಟ್ ಮಿಕ್ಸನಿಂದ ಮಾತ್ರ ನಿರ್ವಹಿಸಬೇಕು. ತಪ್ಪಿದಲ್ಲಿ ಇಲಾಖಾ ನಿಯಮಗಳ ರೀತ್ಯಾ ಕ್ರಮ ಕೈಗೊಳ್ಳಲಾಗುತ್ತದೆ.
9) ಕಾಮಗಾರಿಯನ್ನು ನಿಗದಿತ ಅವಧಿಯೊಳಗೆ ಮುಗಿಸಬೇಕು. ತಪ್ಪಿಲ್ಲಿ ನಿಯಮ ರೀತ್ಯಾ ದಂಡನಾ ಶುಲ್ಕ ತೆರಬೇಕಾಗುತ್ತದೆ.
10) ಗುತ್ತಿಗೆದಾರರು ಸಿಮೆಂಟ್, ಉಕ್ಕು ಡಾಂಬರು ಹಾಗೂ ಕಾಮಗಾರಿಗಳಿಗೆ ಬೇಕಾದ ಎಲ್ಲಾ ಸಾಮಗ್ರಿಗಳ ಸಂಗ್ರಹಕ್ಕೆ ತಮ್ಮ ಸ್ವಂತ ವ್ಯವಸ್ಥೆ ಮಾಡಿಕೊಳ್ಳಬೇಕು. ಇದನ್ನು ಕೆಲಸಕ್ಕೆ ಉಪಯೋಗಿಸುವ ಮೊದಲು ಗುಣನಿಯಂತ್ರಣ ಪರೀಕ್ಷೆಗೆ ಒಳಪಡಿಸಿ, ಫಲಿತಾಂಶವು ಐ.ಎಸ್.ಎಸ್ (I.S.S.) ಗುಣ ಮಟ್ಟಕ್ಕೆ ಸರಿಹೊಂದುವಂತಿರಬೇಕು ಇದನ್ನು ಕೆಲಸದ ಎಲ್ಲಾ ಹಂತಗಳಲ್ಲಿ ಒದಗಿಸಬೇಕು.

11) ಪ್ರತೀ ಟೆಂಡರುದಾರು ರಸ್ತೆ ಕೆಲಸಕ್ಕೆ ಈ ಕೆಳಗೆ ನೀಡಲಾದಂತೆ ಯಂತ್ರೋಪಕರಣ ಸ್ವಂತ ಅಥವಾ ಬಾಡಿಗೆಗೆ ಹೊಂದಿದ್ದು, ಅವುಗಳ ಮಾಲಿಕತ್ವದ ಪುರಾವೆ ಲಗ್ತೀಕರಿಸಬೇಕು. ಪುರಾವೆ ರಹಿತವಾಗಿ ಸಲ್ಲಿಸಿದ ಟೆಂಡರುಗಳನ್ನು ಅನರ್ಹಗೊಳಿಸಲಾಗುವುದು.

12) ಇಎಂಡಿಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್./ ಕಾಲ್‌ಡೆಫೋಸಿಟ್, ಡಿಡಿ, ಬ್ಯಾಂಕಗ್ಯಾರಂಟಿ ಅಥವಾ ಎನ್.ಎಸ್.ಪಿ. ರೂಪದಲ್ಲಿ, (ಎನ್.ಎಸ್.ಸಿ ಯನ್ನು ಕೆಳಸಹಿದಾರರ ಹೆಸರಿಗೆ ಪ್ಲಜ್ ಮಾಡಬೇಕು) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದಿರುವ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಸಂಖ್ಯೆಗಳು | ಮಾಲಿಕತ್ವದ ಪುರಾವೆ |
|---|---|---|---|
| 1 | ಹಾಟ್ ಮಿಕ್ಸ್ ಪ್ಲಾಂಟ್ 40/60 ಟಿಪಿಹೆಚ್ ಯಾ ಹೆಚ್ಚಿನ ಸಾಮರ್ಥ್ಯ (ಎಂ.ಒ.ಆರ್.ಟಿ.ಹೆಚ್. ಮಾದರಿ ಪ್ರಕಾರ) | 1 | ಪರ್ಚೇಸ್ ಇನ್ ವೈಸ್/ಸೇಲ್‌ಡೀಡ್/ಬಾಡಿಗೆ ಪಡೆದ ವಿವರಗಳು (ಮಾಲೀಕನೊಂದಿಗೆ ಉಪಕರಣದ ಮಾಲಿಕತ್ವದ ಪುರಾವೆ ಸಹಿತ ಹಯರ್ ಅಗ್ರಿಮೆಂಟ್) |
| 2 | ಪೇವರ್ ಫಿನಿಷರ್ | 1 | .................. ಅದೇ ..................... |
| 3 | ವೈಬ್ರೇಟರ್ ರೋಡ್ ರೋಲರ್ | 1 | .................. ಅದೇ ..................... |
| 4 | ಸ್ಟಾಟಿಕ್ ರೋಡ್ ರೋಲರ್ | 2 | .................. ಅದೇ ..................... |
| 5 | ಮೆಕ್ಯಾನಿಕಲ್ ಸ್ಪ್ರೇಯರ್ | 2 | .................. ಅದೇ ..................... |
| 6 | ಟಿಪ್ಪರ್ | 4 | ಆರ್.ಟಿ.ಓ. ನೀಡಿದ ನೋಂದಣಿ ಪ್ರಮಾಣ ಪತ್ರದ ಪ್ರತಿ |
| 7 | ಏರ್ ಕಂಪ್ರೆಸರ್ | 2 | ಮಾರಾಟಗಾರರಿಂದ ಪರ್ಚೇಸ್ ಇನ್ ವೈಸ್ ಪ್ರತಿಯೊಂದಿಗೆ ಪರ್ಚೇಸ್ ಇನ್ ವೈಸ್ / ಸೇಲ್ ಡೀಡ್‌ನ ಪ್ರತಿ |

ಕೆಲಸದ ಕುರಿತಾದ ಯಾವುದೇ ಇತರ ವಿವರವನ್ನು ಕಛೇರಿಯ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ.

**ಕೆ. ಸುರೇಶ್ ಶೆಟ್ಟಿ**

ಪಿ.ಆರ್. 596

ಕಾರ್ಯಪಾಲಕ ಇಂಜಿನಿಯರರು,
ಲೋ.ಇ. ಉಡುಪಿ ವಿಭಾಗ, ಉಡುಪಿ.

## ಕಾರ್ಯಪಾಲಕ ಅಭಿಯಂತರರ ಕಛೇರಿ, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ

### ಟೆಂಡರ್ ಪ್ರಕಟಣೆ

**ನಂ./ಜಿ.ಎನ್.ಎಲ್./ಎನ್.ಐ.ಡಿ./ಯು.ಡಿ.ಎನ್./2006-2007/ಜೇ೪, ದಿನಾಂಕ: 25ನೇ ಸೆಪ್ಟೆಂಬರ್ 2006**

ಈ ಕೆಳಗೆ ಸೂಚಿಸಿದ ಕಾಮಗಾರಿಗಳಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಗುತ್ತಿಗೆದಾರರ ನಿರ್ದಿಷ್ಟ ಫಾರಂನಲ್ಲಿ ಕರ್ನಾಟಕ ಟ್ರಾನ್ಸ್‌ಸ್ಪರೆನ್ಸಿ ಇನ್ ಪಬ್ಲಿಕ್ ಪ್ರೋಕ್ಯೂರ್ಮೆಂಟ್ ಆ್ಯಕ್ಟ್ 2000 ದ ಪ್ರಕಾರ ದ್ವಿ ಲಕೋಟೆ ಪದ್ಧತಿಯಲ್ಲಿ ಮೊಹರಾದ ಐಟಂದರ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಟೆಂಡರಿನ ದ್ವಿಲಕೋಟೆ ಬಿಡ್ ಪದ್ಧತಿ, ತಾಂತ್ರಿಕ ಬಿಡ್ ಹಾಗೂ ವಿತ್ತೀಯ (ಫೈನಾನ್ಸಿಯಲ್) ಬಿಡ್ಡನ್ನು ಒಳಗೊಂಡಿದೆ. ಬಿಡ್‌ಗಳನ್ನು ತಾಂತ್ರಿಕ ಬಿಡ್ ಹಾಗೂ ವಿತ್ತೀಯ ಬಿಡ್ ಎಂದು ಗುರುತು ಹಾಕಿದ ಎರಡು ಪ್ರತ್ಯೇಕ ಮೊಹರಾದ ಲಕೋಟೆಗಳಲ್ಲಿ ಎರಡು ಭಾಗಗಳಲ್ಲಿ ಸ್ವೀಕರಿಸಲಾಗುವುದು. ಈ ಎರಡು ಲಕೋಟೆಗಳಿಗೆ ಮೊಹರು ಮಾಡಿ ಕೆಲಸದ ಶಿರೋನಾಮೆ ನಮೂದಿಸಿ ಇನ್ನೊಂದು ಮೊಹರಾದ ಲಕೋಟೆಯಲ್ಲಿಡಬೇಕು ಮತ್ತು ಬಿಡ್ಡುದಾರರ ಹೆಸರು ಹಾಗೂ ಪೂರ್ತಿ ಅಂಚೆ ವಿಳಾಸದೊಂದಿಗೆ ಕೆಳಸಹಿದಾರರಿಗೆ ಕಳುಹಿಸಬೇಕು. ಪೂರ್ತಿಗೊಳಿಸಿದ ಬಿಡ್ಡನ್ನು ಶೆಡ್ಯೂಲ್‌ನಲ್ಲಿ ಒಳಗೊಂಡ ವಿಶೇಷ ನಿಯಮಗಳ ಕೆಪಿಡಬ್ಲ್ಯೂಡಿ ಕೋಡ್ ವಾಲ್ಯೂಂ 2ರ ಫಾರಂನಲ್ಲಿ ಪಿಡಬ್ಲ್ಯೂಜಿ 65 ಹಾಗೂ 66 ರಲ್ಲಿ ಹಾಗೂ ಕರ್ನಾಟಕ ಟ್ರಾನ್ಸ್‌ಸ್ಪರೆನ್ಸಿ ಇನ್ ಪಬ್ಲಿಕ್ ಪ್ರೋಕ್ಯೂರ್ಮೆಂಟ್ ಆ್ಯಕ್ಟ್ 2000 ದಲ್ಲಿ ನಿರೂಪಿತ ಶರ್ತಗೊಳಪಟ್ಟು ದಿನಾಂಕ 27.10.2006 ರಂದು ಸಂಜೆ 4.00 ಗಂಟೆಯವರೆಗೆ ಕಾರ್ಯಕಾರಿ ಅಭಿಯಂತರರು, ಲೋ.ಇ, ಉಡುಪಿ ವಿಭಾಗ, ಉಡುಪಿ ಇವರು ಸ್ವೀಕರಿಸುವರು. ಈ ಕೆಳಗೆ ಸೂಚಿತ ದಿನಾಂಕದಂದು ತಾಂತ್ರಿಕ ಬಿಡ್ಡನ್ನು ತೆರೆಯಲಾಗುವುದು. ತಾಂತ್ರಿಕ ಬಿಡ್ಡ್‌ನಲ್ಲಿ ಅರ್ಹರಾಗಿರುವ ಬಿಡ್ಡ್‌ದಾರರ ವಿತ್ತೀಯ ಬಿಡ್‌ಗಳನ್ನು ಮಾತ್ರ ತೆರೆಯಲಾಗುವುದು.

ಖಾಲಿ ಟೆಂಡರು ಫಾರಂಗಳಿಗೆ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ) ದಿನಾಂಕ: 26.10.2006 ರವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ಅವರ ರಿಜಿಸ್ಟ್ರೇಶನನ ಸರ್ಟಿಫೈಡ್ ಪ್ರತಿಯನ್ನು ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ಈ ಕಛೇರಿಯಲ್ಲಿ ದಿನಾಂಕ: 26.10.2006 ರಂದು ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊಬಲಗು (ರೂ. ಲಕ್ಷಗಳಲ್ಲಿ) | ಇಎಂಡಿ (ರೂ. ಗಳಲ್ಲಿ) | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಕಾಲಮಿತಿ (ಮಳೆಗಾಲ ಹೊರತು) | ಟೆಂಡರ್ ನಮೂನೆ | ಟೆಂಡರ್ (ಶೆಡ್ಯೂಲ್ ಬೆಲೆ) | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 1. | ಉಡುಪಿ ತಾಲ್ಲೂಕು, ಹಿರಿಯಡ್ಕ ಗರೋಡಿ-ವಯ ಮುತ್ತೂರು ರಸ್ತೆ ಅಭಿವೃದ್ಧಿ | 52,30,773.0 | 52350.00 | 9 ತಿಂಗಳು | ದರವಾರು | 5600/- | 1ನೇ ದರ್ಜೆ |

**ಸಾಮಾನ್ಯ ನಿಯಮಗಳು:**

1) ಕೆಲಸದ ಬಿಡ್ಡಿಂಗ್‌ನಲ್ಲಿ ಆಸಕ್ತಿಯುಳ್ಳ ಗುತ್ತಿಗೆದಾರರು ನಗದಾಗಿ ಅಥವಾ ಉಡುಪಿಯಲ್ಲಿ ಪಾವತಿ ಆಗುವಂತೆ ಕಾರ್ಯಕಾರಿ ಅಭಿಯಂತರರು ಉಡುಪಿ ವಿಭಾಗ ಉಡುಪಿ ಅವರ ಹೆಸರಿಗೆ ಪಡೆದ ಡಿಡಿ ರೂಪದಲ್ಲಿ ಪಾತಿಸಬೇಕಾದ ಟೆಂಡರ್ ಶೆಡ್ಯೂಲ್ ಮೌಲ್ಯದೊಂದಿಗೆ (ಇದನ್ನು ಹಿಂದಿರುಗಿಸುವುದಿಲ್ಲ) ಕೆಳಸಹಿದಾರರಿಗೆ ಅರ್ಜಿ ಸಲ್ಲಿಸಬೇಕು. ಅರ್ಜಿ ಜೊತೆ ಗುತ್ತಿಗೆದಾರರ ರಿಜಿಸ್ಟ್ರೇಶನ್ ಸರ್ಟಿಫೈಡ್ ಪ್ರತಿಯೊಂದಿಗೆ ಸಲ್ಲಿಸತಕ್ಕದ್ದು.

2) ಟೆಂಡರಿನಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು ಉದ್ದೇಶಿಸಿರುವ ಕಾಮಗಾರಿಯ ಶೇ. 30 ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ ಐದು ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತ ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.

3) ಕಾಮಗಾರಿ ನಿರ್ವಹಿಸುವರೇ, ಬೇಕಾದ ಆರ್ಥಿಕ ಸಾಮರ್ಥ್ಯ ಹೊಂದಿರುವರೇ ಎನ್ನುವ ಬಗ್ಗೆ ಟೆಂಡರ್ ಮೊಬಲಗಿನ ಶೇ. 30ಕ್ಕೆ ಸಮನಾದ ಮೊಬಲಗಿನ (ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ) ಲೈನ್ ಆಫ್ ಕ್ರೆಡಿಟ್‌ನ್ನು ತಪ್ಪದೆ ನೀಡಬೇಕು.

4) ಕಾಮಗಾರಿ ಪೂರ್ತಿಗೊಳಿಸಿದ ಬಳಿಕ ಎರಡು ವರ್ಷಗಳ ಕಾಲ ಯಾವುದೇ ದುರಸ್ತಿ ಕಾರ್ಯ ಬರಬಾರದು. ಈ ಮೇಲಿನಂತೆ ಪ್ರಕಟಿತ ಚಾಚು / ಚೈನೇಜುಗಳಲ್ಲಿ ಈ ಮೇಲಿನಂತೆ ದುರಸ್ತಿ ಅವಧಿಯಲ್ಲಿ (ಡಿಫೆಕ್ಟ್ ಲಯಾಬಿಲಿಟಿ ಅವಧಿ) ಯಾವುದಾರೂ ದುರಸ್ತಿಬೇಕಾದರೆ ಗುತ್ತಿಗೆದಾರ/ವಾಣಿಜ್ಯ ಸಂಸ್ಥೆ, ಅದನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪುನರ್‌ನಿರ್ಮಿಸಿಕೊಡಬೇಕು.

5) ತಾಂತ್ರಿಕ ಬಿಡ್‌ಗಳ ಪುರಾವೆಯಾಗಿ ಲಗ್ತೀಕೃತ ಎಲ್ಲಾ ದಾಖಲೆಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಿಂತ ಕೆಳಗಿಲ್ಲದ ಶ್ರೇಣಿಯ ಗೆಜೆಟೆಡ್ ಅಧಿಕಾರಿಯವರಿಂದ ದೃಢೀಕರಿಸಿ ಸಲ್ಲಿಸಬೇಕು. ತಪ್ಪಿದರೆ ಬಿಡ್‌ಗಳನ್ನು ಅನರ್ಹಗೊಳಿಸಲಾಗುತ್ತದೆ. ಮೂಲ ದಾಖಲೆಗಳನ್ನು ಯಾವುದೇ ಹಂತದಲ್ಲಿ ಪರಿಶೀಲನಾರ್ಥವಾಗಿ ಕೇಳಿದಾಗ ಹಾಜರುಪಡಿಸಬೇಕು. ಮೂಲ ದಾಖಲೆಗಳನ್ನು ನೀಡಲು ತಪ್ಪಿದರೆ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತದೆ.

6) ತಾಂತ್ರಿಕ ಬಿಡ್‌ನೊಂದಿಗೆ ಸಮಂಜಸವಾದ (ರಿಲೆವೆಂಟ್) ಪ್ರಮಾಣಪತ್ರಗಳು ಹಾಗೂ ವಿವರಗಳನ್ನು ಮಾತ್ರ ಲಗ್ತೀಕರಿಸಬೇಕು. ಕಂಪನಿ:ಏಜೆನ್ಸಿಗಳು / ವಾಣಿಜ್ಯ ಸಂಸ್ಥೆಗಳ:ಪ್ರೊಫೈಲ್ ವಿವರಗಳನ್ನು ಲಗ್ತೀಕರಿಸಬೇಕು.

7) ಶರ್ತ ಬದ್ಧ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.

8) ಈ ಮೇಲಿನ ರಸ್ತೆ ಕೆಲಸವನ್ನು ಎಂ.ಓ.ಆರ್.ಟಿ.ಎಚ್. ಮಾದರಿ ಪ್ರಕಾರವಿರುವ ಪೇವರ್‌ಯುಕ್ತವಾದ (paver finish) ಹಾಟ್ ಮಿಕ್ಸನಿಂದ ಮಾತ್ರ ನಿರ್ವಹಿಸಬೇಕು. ತಪ್ಪಿದಲ್ಲಿ ಇಲಾಖಾ ನಿಯಮಗಳ ರೀತ್ಯಾ ಕ್ರಮ ಕೈಗೊಳ್ಳಲಾಗುತ್ತದೆ.

9) ಕಾಮಗಾರಿಯನ್ನು ನಿಗದಿತ ಅವಧಿಯೊಳಗೆ ಮುಗಿಸಬೇಕು. ತಪ್ಪಿದಲ್ಲಿ ನಿಯಮ ರೀತ್ಯಾ ದಂಡನಾ ಶುಲ್ಕ ತೆರಬೇಕಾಗುತ್ತದೆ.

10) ಗುತ್ತಿಗೆದಾರರು ಸಿಮೆಂಟ್, ಉಕ್ಕು ಡಾಂಬರು ಹಾಗೂ ಕಾಮಗಾರಿಗಳಿಗೆ ಬೇಕಾದ ಎಲ್ಲಾ ಸಾಮಗ್ರಿಗಳ ಸಂಗ್ರಹಕ್ಕೆ ತಮ್ಮ ಸ್ವಂತ ವ್ಯವಸ್ಥೆ ಮಾಡಿಕೊಳ್ಳಬೇಕು. ಇದನ್ನು ಕೆಲಸಕ್ಕೆ ಉಪಯೋಗಿಸುವ ಮೊದಲು ಗುಣನಿಯಂತ್ರಣ ಪರೀಕ್ಷೆಗೆ ಒಳಪಡಿಸಿ, ಫಲಿತಾಂಶವು ಐ.ಎಸ್.ಎಸ್ (I.S.S.) ಗುಣ ಮಟ್ಟಕ್ಕೆ ಸರಿಹೊಂದುವಂತಿರಬೇಕು ಇದನ್ನು ಕೆಲಸದ ಎಲ್ಲಾ ಹಂತಗಳಲ್ಲಿ ಒದಗಿಸಬೇಕು.

11) ಪ್ರತೀ ಟೆಂಡರುದಾರು ರಸ್ತೆ ಕೆಲಸಕ್ಕೆ ಈ ಕೆಳಗೆ ನೀಡಲಾದಂತೆ ಯಂತ್ರೋಪಕರಣ ಸ್ವಂತ ಅಥವಾ ಬಾಡಿಗೆಗೆ ಹೊಂದಿದ್ದು, ಅವುಗಳ ಮಾಲಿಕತ್ವದ ಪುರಾವೆ ಲಗ್ತೀಕರಿಸಬೇಕು. ಪುರಾವೆ ರಹಿತವಾಗಿ ಸಲ್ಲಿಸಿದ ಟೆಂಡರುಗಳನ್ನು ಅನರ್ಹಗೊಳಿಸಲಾಗುವುದು.

12) ಇಎಂಡಿಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್./ ಕಾಲ್‌ಡೆಪೋಸಿಟ್, ಡಿಡಿ, ಬ್ಯಾಂಕಗ್ಯಾರಂಟಿ ಅಥವಾ ಎನ್.ಎಸ್.ಪಿ. ರೂಪದಲ್ಲಿ, (ಎನ್.ಎಸ್.ಸಿ ಯನ್ನು ಕೆಳಸಹಿದಾರರ ಹೆಸರಿಗೆ ಪ್ಲಜ್ ಮಾಡಬೇಕು) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದಿರುವ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಸಂಖ್ಯೆಗಳು | ಮಾಲಿಕತ್ವದ ಪುರಾವೆ |
|---|---|---|---|
| 1 | ಹಾಟ್ ಮಿಕ್ಸ್ ಪ್ಲಾಂಟ್ 40/60 ಟಿಪಿಹೆಚ್ ಯಾ ಹೆಚ್ಚಿನ ಸಾಮರ್ಥ್ಯ (ಎಂ.ಓ.ಆರ್.ಟಿ.ಹೆಚ್. ಮಾದರಿ ಪ್ರಕಾರ) | 1 | ಪರ್ಚೆಸ್ ಇನ್ ವೈಸ್/ಸೇಲ್‌ಡೀಡ್/ಬಾಡಿಗೆ ಪಡೆದ ವಿವರಗಳು (ಮಾಲೀಕನೊಂದಿಗೆ ಉಪಕರಣದ ಮಾಲಿಕತ್ವದ ಪುರಾವೆ ಸಹಿತ ಹಯರ್ ಅಗ್ರಿಮೆಂಟ್) |
| 2 | ಪೇವರ್ ಫಿನಿಷರ್ | 1 | .................. ಅದೇ .................... |
| 3 | ವೈಬ್ರೇಟರ್ ರೋಡ್ ರೋಲರ್ | 1 | .................. ಅದೇ .................... |
| 4 | ಸ್ಟಾಟಿಕ್ ರೋಡ್ ರೋಲರ್ | 2 | .................. ಅದೇ .................... |
| 5 | ಮೆಕ್ಯಾನಿಕಲ್ ಸ್ಪ್ರೇಯರ್ | 2 | .................. ಅದೇ .................... |
| 6 | ಟಿಪ್ಪರ್ | 4 | ಆರ್.ಟಿ.ಓ. ನೀಡಿದ ನೋಂದಣಿ ಪ್ರಮಾಣ ಪತ್ರದ ಪ್ರತಿ |
| 7 | ಏರ್ ಕಂಪ್ರೆಸರ್ | 2 | ಮಾರಾಟಗಾರರಿಂದ ಪರ್ಚೆಸ್ ಇನ್ ವೈಸ್ ಪ್ರತಿಯೊಂದಿಗೆ ಪರ್ಚೆಸ್ ಇನ್ ವೈಸ್ / ಸೇಲ್ ಡೀಡ್‌ನ ಪ್ರತಿ |

ಕೆಲಸದ ಕುರಿತಾದ ಯಾವುದೇ ಇತರ ವಿವರವನ್ನು ಕಛೇರಿಯ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ.

**ಕೆ. ಸುರೇಶ್ ಶೆಟ್ಟಿ**
ಕಾರ್ಯಪಾಲಕ ಇಂಜಿನಿಯರರು,
ಲೋ.ಇ. ಉಡುಪಿ ವಿಭಾಗ, ಉಡುಪಿ.

ಪಿ.ಆರ್. 597

## ಕಾರ್ಯಪಾಲಕ ಅಭಿಯಂತರರ ಕಛೇರಿ, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ

## ಅಲ್ಪಾವಧಿ ಟೆಂಡರ್ ಪ್ರಕಟಣೆ

**ನಂ./ಜಿ.ಎನ್.ಎಲ್./ಟಿ.ಎನ್.ಡಿ/ಯು.ಡಿ.ಎನ್./2006-2007/ಜೇ೩, ದಿನಾಂಕ: 25ನೇ ಸೆಪ್ಟೆಂಬರ್ 2006**

ಈ ಕೆಳಗೆ ಸೂಚಿಸಿದ ಕಾಮಗಾರಿಗಳಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನಿರ್ದಿಷ್ಟ ಫಾರಂನಲ್ಲಿ ಕರ್ನಾಟಕ ಟ್ರಾನ್ಸ್‌ಸ್ಪರೆನ್ಸಿ ಇನ್ ಪಬ್ಲಿಕ್ ಪ್ರೊಕ್ಯೂರ್ಮೆಂಟ್ ಆಕ್ಟ್ 2000 ದ ಪ್ರಕಾರ ಐಟಂವಾರು ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಪೂರ್ತಿಗೊಳಿಸಿದ ಟೆಂಡರನ್ನು ಶೆಡ್ಯೂಲ್‌ನಲ್ಲಿ ಒಳಗೊಂಡ ವಿಶೇಷ ನಿಯಮಗಳ ಕೆಪಿಡಬ್ಲ್ಯೂಡಿ ಕೋಡ್ ವಾಲ್ಯೂಂ 2ರ ಫಾರಂ ನಂ ಪಿಬ್ಲ್ಯೂಜಿ 65 ಹಾಗೂ 66 ರಲ್ಲಿ ಕರ್ನಾಟಕ ಟ್ರಾನ್ಸಫರೆನ್ಸಿ ಇನ್ ಪಬ್ಲಿಕ್ ಪ್ರೊಕ್ಯೂರ್ಮೆಂಟ್ ಆಕ್ಟ್ 2000 ದಲ್ಲಿ ನಿರೂಪಿತ ಶರ್ತಗಳಿಗೊಳಪಟ್ಟು ದಿನಾಂಕ 27.10.2006 ರಂದು ಸಂಜೆ 4.00 ಗಂಟೆಯವರೆಗೆ ಕಾರ್ಯಕಾರಿ ಅಭಿಯಂತರರು, ಲೋಕೋಪಯೋಗಿ ಇಲಾಖೆ ಉಡುಪಿ ವಿಭಾಗ ಉಡುಪಿ ಇವರು ಸ್ವೀಕರಿಸುವರು.

